'ಮಾರ್ಟಿನನ ಸಾಹಸ' ಆರ್. ಎಂ. ಬ್ಯಾಲೆಂಟೈನರ
'ಮಾರ್ಟಿನ್ ರ್‍ಯಾಟ್ಲರ್' ಎಂಬ ಪುಸ್ತಕದ
ಕನ್ನಡ ಸಂಗ್ರಹಾನುವಾದ.

ಮುದ್ರಕರು:
ಕೆನರಾ ಛಾಪಖಾನೆ, ಮಂಗಳೂರು-1.

# ಮಾರ್ಟಿನನ ಸಾಹಸ

## ಒಂದು

ಆಶ್‌ಫರ್ಡ್ ಎಂಬ ಊರು ಇಂಗ್ಲಾಂಡಿನ ಸಮುದ್ರ ತೀರದಲ್ಲಿದೆ. ಆ ಊರಿನಲ್ಲಿ ನಡುಪ್ರಾಯ ಕಳೆದ, ಬಡವಳಾದ, ಬಂಧು ಬಳಗವಿಲ್ಲದ ದೊರತಿ ಎಂಬ ಹೆಂಗಸಿದ್ದಳು. ಆವಳ ಮನೆಯಲ್ಲಿ ತಬ್ಬಲಿಯಾದ ಅವಳ ಅಣ್ಣನ ಮಗನಲ್ಲದೆ ಬೇರೆ ಯಾರೂ ಇರಲಿಲ್ಲ. ಆ ಹುಡುಗನೆಂದರೆ ಆಕೆಗೆ ಜೀವ. ಅವನ ಹೆಸರು ಮಾರ್ಟಿನ್. ಮಾರ್ಟಿನ್ ಮೊದ್ದು ಸ್ವಭಾವದವನಲ್ಲ; ಚುರುಕಾದವನು. ಸುಮ್ಮನೆ ಇರುವುದೆಂದರೆ ಅವನಿಗೆ ಏನೆಂಬುದೇ ಅರಿಯದು. ಏನಾದರೊಂದು ಕೆಲಸ, ತಂಟೆ ಮಾಡುತ್ತಲೇ ಇರಬೇಕು. ಗುಂಗುರು ಕೂದಲು, ದುಂಡು ಮೋರೆ, ಮಿನುಗುವ ಕಣ್ಣು, ತುಂಟ ನಗು ಸೂಸುವ ತುಟಿಗಳು, ಹೃಷ್ಟಪುಷ್ಟವಾದ ಉರುಟುರುಟಾದ ಕೈ ಕಾಲುಗಳು, ಇವೆಲ್ಲವುಗಳಿಂದ ಕೂಡಿದ ಮಾರ್ಟಿನನನ್ನು ನೋಡಿದವರಿಗೆ ಸಂತೋಷವಾಗದಿರದು; ಪ್ರೀತಿ ಹುಟ್ಟದಿರದು. ಮಾರ್ಟಿನನ ತುಂಟ ಸ್ವಭಾವ ಅವನ ಅತ್ತೆ ದೊರತಿಗೆ ಸರಿ ಹೋಗುತ್ತಿರಲಿಲ್ಲ. ಈ ಹುಡುಗ ಮುಂದೆ ತುಡುಗನಾಗುತ್ತಾನಲ್ಲಾ ಎಂಬ ಚಿಂತೆ. ಆದರೆ ಆ ಊರಿನ ಪಾದ್ರಿಗೆ ಮಾರ್ಟಿನನ ಮೇಲೆ ತುಂಬಾ ಪ್ರೀತಿ, ವಿಶ್ವಾಸ. ಮಾರ್ಟಿನನೊಬ್ಬ ಸಾಹಸ ಜೀವಿಯಾಗುವನೆಂದು ಅವನ ನಂಬಿಕೆ; ಹೇಳಿಕೆ.

ಅತ್ತೆ ದೊರತಿ ತುಂಟ ಮಾರ್ಟಿನನನ್ನು ಬಹಳ ಮಮತೆಯಿಂದ ಸಾಕಿ ಬೆಳೆಸಿದಳು. ಅವನು ಅತ್ತೆಯ ಆರೈಕೆಯಲ್ಲಿ ಬೆಳೆದು ಶಾಲೆಗೆ ಹೋಗುವ ಪ್ರಾಯಕ್ಕೆ ಬಂದನು. ಹುಡುಗನನ್ನು

ಶಾಲೆಗೆ ಹಾಕಬೇಕು. ಆದರೆ ಶಾಲೆಯ ಸಂಬಳಕ್ಕೆ, ಪುಸ್ತಕಕ್ಕೆ, ಸ್ಲೇಟಿಗೆ ಹಣ ಬೇಕಲ್ಲಾ! ಎಲ್ಲಿಂದ ತರುವುದು? ಯಾರೊಡನೆ ಕೇಳುವುದು? ಎಂಬ ಯೋಚನೆ. ಆದರೂ ದೊರತಿ ತನ್ನದೇ ರೀತಿಯಲ್ಲಿ ಹಣದ ಅಡಚಣೆಯನ್ನು ಬಗೆಹರಿಸಿದಳು. ಅವಳಿಗೆ ಕಾಲುಚೀಲ ನೇಯಲು ಗೊತ್ತಿತ್ತು. ಕಾಲುಚೀಲ ನೆಯಿದು ಕೊಡುತ್ತೇನೆಂದು ಹೇಳಿ, ಊರಿನ ಅಂಗಡಿಯಿಂದ ಸ್ವಲ್ಪ ಉಣ್ಣೆ ತಂದಳು. ಕಾಲುಚೀಲಗಳನ್ನು ನೆಯಿದು ಉಣ್ಣೆಯ ಕ್ರಯಕ್ಕೆ ಸಾಕಾಗುವಷ್ಟು ನಾಲ್ಕು ಜತೆ ಅಂಗಡಿಗೆ ಕೊಟ್ಟಳು. ಉಳಿದ ನಾಲ್ಕು ಜತೆಗಳನ್ನು ಊರಿನ ಪಾದ್ರಿಗೆ ಮಾರಿದಳು. ಕಾಲು ಚೀಲ ಮಾರಿಬಂದ ಹಣವನ್ನು ಖರ್ಚುಮಾಡಿ ಮಾರ್ಟಿನನನ್ನು ಶಾಲೆಗೆ ಕಳುಹಿಸಿದಳು. ಮಾರ್ಟಿನ್ ಶಾಲೆಗೆ ಹೋಗ ತೊಡಗಿದನು.

## ಎರಡು

ಚಳಿ ದೇಶಗಳಲ್ಲಿ ಯಾವಾಗಲೂ ಚಳಿ. ಅಲ್ಲಿ ಮನೆಗಳನ್ನೂ, ವೈಗಳನ್ನೂ ಬೆಚ್ಚಗೆ ಇಡಲಿಕ್ಕಾಗಿ ಯಾವಾಗಲೂ ಅಗ್ಗಿಷ್ಟಿಕೆಗಳನ್ನು ಉರಿಸುತ್ತಾರೆ. ಮಾರ್ಟಿನ್ ಹೋಗುತ್ತಿದ್ದ ಶಾಲೆಯಲ್ಲಿಯೂ ಚಳಿ ತಡೆಯಲಿಕ್ಕಾಗಿ ಅಗ್ಗಿಷ್ಟಿಕೆಗಳನ್ನು ಇರಿಸಿದ್ದರು. ಒಂದು ದಿನ ಉಪಾಧ್ಯಾಯರು ಮಾರ್ಟಿನನನ್ನು ಕರೆದು, "ಮಾರ್ಟಿನ್, ಅಗ್ಗಿಷ್ಟಿಕೆಗೆ ಇಷ್ಟು ಇದ್ದಲು ಹಾಕಿ, ಬೆಂಕಿ ಸರಿ ಮಾಡಿ ಬಾ; ಬೆಂಕಿಯ ಬಳಿ ಕುಳಿತು ಕಿಡಿಹಾರುವುದನ್ನು ನೋಡುತ್ತ ಬೆಂಕಿ ಯಲ್ಲಿ ಆಡುವುದು ಮಾತ್ರ ಬೇಡ" ಎಂದು ಅಗ್ಗಿಷ್ಟಿಕೆಯ ಬಳಿ ಬೆಂಕಿ ಸರಿಮಾಡಲು ಕಳುಹಿಸಿದರು.

ಉಪಾಧ್ಯಾಯರ ಮಾತು ಮುಗಿಯುವ ಮೊದಲೇ ಮಾರ್ಟಿನ್ ಕುಳಿತಲ್ಲಿಂದ ಎದ್ದು ಬೆಂಕಿಯ ಬಳಿ ಸೇರಿಯಾಗಿತ್ತು. ಅವನು ಇಕ್ಕಳ ಹಿಡಿದು ಬೆಂಕಿ ಸರಿಯಾಗಿ ಉರಿಯುವಂತೆ ಕೆಂಡವನ್ನು ಕೆದರಿ ನಾಲ್ಕಾರು ಇದ್ದಲು ತುಂಡು ಬೆಂಕಿಗೆ ಚಚ್ಚಿ

ದನು. ತಟಪಟ ಕಿಡಿ ಹಾರುವುದನ್ನು ನೋಡಿ ತನ್ನಷ್ಟಕ್ಕೆ ಸಂತೋಷಿಸಿದನು. ಮತ್ತೂ ನಾಲ್ಕಾರು ಸಲ ಬೆಂಕಿಗೆ ಇದ್ದಲು ಸುರಿದನು; ಕಿಡಿ ಹಾರಿಸಿದನು. ಆ ಶಾಲೆಯಲ್ಲಿ ಬಾಬ್ ಎಂಬ ಒಬ್ಬ ತುಂಟ ಹುಡುಗನಿದ್ದನು. ತಂಟೆಯಲ್ಲಿ ಅವನೇ ಮುಂದಾಳು. ಒಂದೊಂದು ತರಗತಿಯಲ್ಲಿಯೂ ಎರಡೆರಡು ವರ್ಷ ಕಳೆಯದೆ ಅವನು ಮುಂದಿನ ತರಗತಿಗೆ ಹೋಗುತ್ತಿರಲಿಲ್ಲ. ಆ ಹುಡುಗ ಮಾರ್ಟಿನ್ ಬೆಂಕಿಯಲ್ಲಿ ಆಡುವುದನ್ನು ನೋಡಿದ. ಕುಳಿತ ಲ್ಲಿಂದಲೇ, "ಸಾರ್, ಮಾರ್ಟಿನ್ ಬೆಂಕಿಯಲ್ಲಿ ಆಡುತ್ತಾನೆ" ಎಂದು ಕೂಗಿದ. "ಮಾರ್ಟಿನ್, ಇಲ್ಲಿ ಬಾ!" ಎಂದು ಉಪಾಧ್ಯಾಯರು ಕುಳಿತಲ್ಲಿಂದಲೇ ಗರ್ಜಿಸಿದರು.

ಉಪಾಧ್ಯಾಯರ ಮಾತು ಮುಗಿಯುವುದರೊಳಗೆ ಮಾರ್ಟಿನ್, "ಇಲ್ಲ ಸಾರ್, ಬಂದೆ ಸಾರ್" ಎನ್ನುತ್ತಾ ತನ್ನ ಸ್ಥಳದಲ್ಲಿ ಬಂದು ಕುಳಿತ; ಅವನ ಕೈ ಬೆರಳಿಗೆ ಮಸಿಯಾಗಿತ್ತು. ಅದನ್ನು ಬಳಿಯಲ್ಲಿ ಕುಳಿತ ಸಾಧು ಹುಡುಗನೊಬ್ಬನ ಮೋರೆಯ ಮೇಲೆ ಮೆಲ್ಲಗೆ ಎಳೆದ; ಒಂದು ಮುಗುಳು ನಗೆ ನಕ್ಕ. ಹುಡುಗನ ಮೋರೆಯ ಮೇಲೆ ಮಸಿ ನಾಮ! ಬಳಿಯಲ್ಲಿದ್ದ ಇತರ ಹುಡುಗರು ಈ ತಂಟೆಯನ್ನು ನೋಡಿ ಮನಸ್ಸಿನಲ್ಲೇ ನಗುತ್ತಿದ್ದರು.

ತರಗತಿಯಲ್ಲಿ ಇಷ್ಟೆಲ್ಲ ನಡೆಯುತ್ತಿದ್ದಾಗ ಉಪಾಧ್ಯಾಯರು ಭೂಗೋಳದ ಪ್ರಶ್ನೆ ಕೇಳುತ್ತಿದ್ದರು. "ಹೂನ ಜನಾಂಗದವರು ಮೊದಲು ಎಲ್ಲಿ ವಾಸಿಸುತ್ತಿದ್ದರು?" ಇದು ಉಪಾಧ್ಯಾಯರು ಕೇಳಿದ ಪ್ರಶ್ನೆ. ಆಗ ಮಾರ್ಟಿನನ ತುಂಟತನದ ಕಡೆಗೆ ಮನಸ್ಸಿಟ್ಟಿದ್ದ ಹುಡುಗನೊಬ್ಬನು "ನಾಚಿಕೆ ಕೇಡು" ಎಂದು ಕೂಗಿದನು. ಉಪಾಧ್ಯಾಯರು "ಮುಚ್ಚೊ, ಬಾಯಿ!" ಎಂದು ಮೇಜಿನ ಮೇಲೆ ಬೆತ್ತದಿಂದ ಹೊಡೆದು, "ಮುಂದೆ" ಎಂದರು. ಮುಂದಿನ ಹುಡುಗ "ಆಸ್ಯಾ ಖಂಡದಲ್ಲಿ" ಎಂದು ಉತ್ತರಿಸಿದನು. "ತಪ್ಪು! ಮುಂದೆ!" ಎಂದು ಉಪಾಧ್ಯಾಯರು ಮುಂದುವರಿಸಿದರು. 'ಟರ್ಕಿ' ಎಂದು

ಉತ್ತರ ಬಂತು. "ತಪ್ಪು! ಸರಿಯಲ್ಲ! ಮುಂದೆ! ಮುಂದೆ!" ಎನ್ನುತ್ತಾ ಉಪಾಧ್ಯಾಯರು ಮುಂದುವರಿಸಿದರು. ಫಕ್ಕನೆ ಅವರ ಕಣ್ಣು ಅರಳಿತು; ಮೋರೆ ಕೆಂಪೇರಿತು. "ಜಾನ್, ಇದೇನು?" ಎಂದು ಮಸಿನಾಮ ಹಾಕಿಸಿಕೊಂಡು ಕುಳಿತಿದ್ದ ಹುಡುಗನನ್ನು ಕೇಳಿದರು. "ಏನಿಲ್ಲ ಸಾರ್" ಎಂದು ಜಾನ್ ಉತ್ತರ ಕೊಟ್ಟಾಗ ತರಗತಿಯ ಹುಡುಗರೆಲ್ಲ ಗುಸು ಗುಸು ನಗಾಡಿದರು.

"ಏನಿಲ್ಲ ಸಾರ್! ನೋಡು ನಿನ್ನ ಮೋರೆಗೆ ಯಾರೋ ಮಸಿ ಹಚ್ಚಿದ್ದಾರೆ! ನೋಡು, ನೋಡು" ಎಂದರು ಉಪಾಧ್ಯಾಯರು. "ಇಲ್ಲ ಸಾರ್, ಯಾರೂ ಇಲ್ಲ ಸಾರ್" ಎನ್ನುತ್ತ ತನ್ನ ಅಂಗಿಯ ಕೈಯಿಂದ ಮೋರೆ ಒರೆಸಿದಾಗ ಅವನ ಅಂಗಿಯ ಕೈಗೆಲ್ಲಾ ಮಸಿಯಾಯಿತು. ಇದನ್ನು ನೋಡಿ ಅಷ್ಟರ ವರೆಗೆ ಗುಸು ಗುಸು ನಗುತ್ತಿದ್ದ ಮಕ್ಕಳು ಗೊಳ್ಳೆಂದು ನಕ್ಕರು. ಉಪಾಧ್ಯಾಯರು ಸಿಟ್ಟಿನಿಂದ ಒಮ್ಮೆ ಬೆತ್ತ ಬೀಸಿದರು. ಬೆತ್ತದ 'ರುಂಯಿ' ಶಬ್ದ ಕೇಳಿ ಮಕ್ಕಳ ನಗು ಮಾಯವಾಯಿತು. ಎಲ್ಲ ಕಡೆ ಮೌನ ಆವರಿಸಿತು. ಆ ಬೆತ್ತಕ್ಕೆ ಅಷ್ಟು ಶಕ್ತಿಯಿತ್ತು.

"ಮಾರ್ಟಿನ್, ಇಲ್ಲಿ ಬಾ! ನೋಡುವ! ನಿನ್ನ ಕೈ ನೋಡುವ! ಇದೆಲ್ಲ ನಿನ್ನ ಪಿಕಲಾಟವಲ್ಲವೇ? ಜಾನನ ಮೋರೆಗೆ ಯಾರು ಮಸಿ ಹಚ್ಚಿದ್ದು ಹೇಳು!" ಎಂದು ಗರ್ಜಿಸಿದರು. "ಹೌದು ಸಾರ್, ನಾನೇ ಹಚ್ಚಿದ್ದು. ತಪ್ಪಾಯಿತು" ಎಂದು ಮಾರ್ಟಿನ್ ಧೈರ್ಯದಿಂದ ಉತ್ತರಿಸಿದ. ಮಾರ್ಟಿನ್ ಎಷ್ಟೇ ತುಂಟನಾದರೂ ಸುಳ್ಳು ಹೇಳಲಾರ; ಮೋಸ ಮಾಡಲಾರ. ಅವನ ಅತ್ತೆ ದೊರತಿ ಸುಳ್ಳು ಹೇಳುವುದು, ಮೋಸ ಮಾಡುವುದು ಮಹಾ ಪಾಪವೆಂದು ಅವನಿಗೆ ಹೇಳಿಕೊಟ್ಟಿದ್ದಳು. ಅವನೂ ಅದನ್ನೇ ನಂಬಿ ಅಂತೆಯೇ ನಡೆಯುತ್ತಿದ್ದನು. ಆದುದರಿಂದಲೇ ಉಪಾಧ್ಯಾಯರು ಕೇಳಿದೊಡನೆಯೇ ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡನು. ಹುಡುಗ ಸತ್ಯ ಹೇಳಿದನೆಂದು ಉಪಾಧ್ಯಾಯರಿಗೆ ಸಮಾಧಾನವಾದರೂ

ಅವನಿಗೆ ಏನಾದರೂ ಶಿಕ್ಷೆ ಕೊಡದೆ ಬಿಡಲು ಅವರಿಗೆ ಮನಸ್ಸಿಲ್ಲ. "ಮಾರ್ಟಿನ್, ನೀನು ತಪ್ಪನ್ನು ಒಪ್ಪಿಕೊಂಡೆ. ಆದುದರಿಂದ ನಿನಗೆ ಕಠಿಣ ಶಿಕ್ಷೆಯಿಲ್ಲ; ಸಾಮಾನ್ಯ ಶಿಕ್ಷೆ. ನೀನು ಇಂದು ಆಟಕ್ಕೆ ಸೇರಕೂಡದು. ಆಟ ಮುಗಿಯುವ ವರೆಗೂ ತರಗತಿಯಲ್ಲೇ ಸುಮ್ಮಗೆ ಕುಳಿತಿರು" ಎಂದು ಹೇಳಿ ಮಕ್ಕಳನ್ನೆಲ್ಲ ಆಟಕ್ಕೆ ಕಳುಹಿಸಿದರು.

ಮಾರ್ಟಿನ್ ಒಬ್ಬನೇ ಬೇಸರದಿಂದ ತರಗತಿಯಲ್ಲಿ ಕುಳಿತನು. ಅವನ ಬೆಕ್ಕಿನ ಮರಿ ಅಲ್ಲೇ ಹೊರಗೆ ಕುಳಿತಿತ್ತು. ಬೆಕ್ಕಿನ ಮರಿಯ ವಿಷಯ ಒಂದು ಮಾತು. ಮಾರ್ಟಿನನ ಅತ್ತೆ ದೊರತಿ ಒಂದು ಸೊಗಸಾದ ಬೆಕ್ಕಿನ ಮರಿ ಸಾಕಿದ್ದಳು. ಮಾರ್ಟಿನ್ ಒಮ್ಮೊಮ್ಮೆ ಆ ಬೆಕ್ಕಿನ ಮರಿಯನ್ನು ಶಾಲೆಗೆ ತರುತ್ತಿದ್ದನು. ಪಾಠಕ್ಕೆ ಬಿಡುವಿದ್ದಾಗ ತರಗತಿಯ ತುಂಟ ಮಕ್ಕಳೆಲ್ಲ ಒಟ್ಟು ಕೂಡಿ ಬೆಕ್ಕಿನ ಮರಿಯೊಡನೆ ಆಡುತ್ತಿದ್ದರು. ಈ ದಿನ ಹುಡುಗರೆಲ್ಲ ಆಟಕ್ಕೆ ಹೋದರು. ಮಾರ್ಟಿನ್ ಒಬ್ಬನೇ ತರಗತಿಯಲ್ಲಿ ಇದ್ದಾನೆ. ಬೆಕ್ಕಿನ ಮರಿ ಇದೆಲ್ಲ ಏನೆಂದು ಸುಮ್ಮಗೆ ಬಾಗಿಲ ಬಳಿ ಪಿಳಿ ಪಿಳಿ ಮಾಡಿ ಕುಳಿತಿದೆ.

ಬಾಬ್ ಮೆಲ್ಲಗೆ ಮಾರ್ಟಿನನ ಬಳಿಗೆ ಬಂದು "ಮಾರ್ಟಿನ್, ನಿನ್ನ ಬೆಕ್ಕಿನ ಮರಿಗೆ ಈಜಾಡಲು ಕಲಿಸಬೇಕೋ? ಅದಕ್ಕೆ ಈಜಾಡಲು ಗೊತ್ತಿದ್ದರೆ ಒಳ್ಳೆಯದಲ್ಲವೇ?" ಎಂದು ಹೇಳಿ, ಬಾಗಿಲ ಬಳಿಯಲ್ಲಿದ್ದ ಬೆಕ್ಕಿನ ಮರಿಯನ್ನು ಎತ್ತಿಕೊಂಡ.

"ಬೇಡ, ಬೇಡ, ಮರಿಗೆ ಈಜಾಡಲು ಕಲಿಸಬೇಡ" ಎಂದು ಕುಳಿತಲ್ಲಿಂದಲೇ ಮಾರ್ಟಿನ್ ಬಾಬನನ್ನು ಬೇಡಿಕೊಂಡ. ಬಾಬನಿಗೆ ಏನಾದರೊಂದು ತಂಟೆ ಮಾಡಲೇ ಬೇಕಿತ್ತು. ಅವನು ಮಾರ್ಟಿನನ ಬೇಡಿಕೆಗೆ ಕಿವಿಕೊಡದೆ ಬೆಕ್ಕಿನ ಮರಿಯನ್ನು ಎತ್ತಿಕೊಂಡು ನಡೆದೇಬಿಟ್ಟ. "ಸಾರ್, ನನ್ನ ಬೆಕ್ಕಿನ ಮರಿ! ಬಾಬ್!" ಎಂದು ಮಾರ್ಟಿನ್ ಕುಳಿತಲ್ಲಿಂದಲೇ ಕಣ್ಣೀರು ಸುರಿಸಿದ. "ಒಮ್ಮೆ

ಬಿಡಿ ಸಾರ್, ಒಮ್ಮೆ ಹೋಗಲು ಬಿಡಿ. ಇಲ್ಲವಾದರೆ ನನ್ನ ಬೆಕ್ಕಿನ ಮರಿಗೆ ಉಳಿಗಾಲವಿಲ್ಲ." ಎಂದು ಅಂಗಲಾಚಿ ಬೇಡಿಕೊಂಡ. ಮಾರ್ಟಿನನ ಆಗಿನ ಸ್ಥಿತಿಯನ್ನು ನೋಡಿ ಉಪಾಧ್ಯಾಯರಿಗೆ ಕನಿಕರ ಹುಟ್ಟಿತು. ಅವರು "ಹೋಗಪ್ಪಾ! ಹೋಗು. ನಿನ್ನ ಬೆಕ್ಕಿನ ಮರಿ ಉಳಿದುಕೊಳ್ಳಲಿ" ಎಂದು ಮಾರ್ಟಿನನನ್ನು ಹೋಗಬಿಟ್ಟರು.

## ಮೂರು

ಉಪಾಧ್ಯಾಯರ ಮಾತು ಮುಗಿಯುವುದರೊಳಗೆ ಮಾರ್ಟಿನ್ ಕುಳಿತಲ್ಲಿಂದ ಎದ್ದು ಬಾಬನ ಬೆನ್ನು ಹಿಡಿದಾಗಿತ್ತು. "ಬಿಡೋ ನನ್ನ ಬೆಕ್ಕಿನ ಮರಿಯನ್ನು, ಅದನ್ನು ಕೊಲ್ಲ ಬೇಡ, ಬಡ ಮರಿಯನ್ನು ಬಿಟ್ಟು ಬಿಡು" ಎಂದು ಮಾರ್ಟಿನ್ ಹೇಳು ತಿದ್ದಂತೆಯೇ ಬಾಬ್ ಮರಿಯ ಕುತ್ತಿಗೆ ಹಿಡಿದು ಒಂದು ಸುತ್ತು ತಿರುಗಿಸಿ ಹತ್ತಿರದಲ್ಲೇ ಹರಿಯುತಿದ್ದ ಹಳ್ಳಕ್ಕೆ ಎಸೆದೂ ಆಗಿತ್ತು. ಆ ಮರಿ ಅತಿ ಚುರುಕಾದ ಮರಿ. ಶಾಲೆಯ ಹುಡುಗರು ನಗುತ್ತ ನೋಡುತ್ತಿದ್ದಂತೆಯೇ ಅದು ಬುಳಂಕನೆ ನೀರಲ್ಲಿ ಮುಳುಗಿ, ಫಳಕ್ಕನೆ ಮೇಲೆ ಬಂದು, 'ಮ್ಯಾಂ ಮ್ಯಾಂ' ಎನ್ನುತ್ತ ದಡ ಸೇರಿ ಬಿಟ್ಟಿತು. ಮರಿ ದಡಸೇರುವಷ್ಟರಲ್ಲಿ ಬಾಬ್ ಅದನ್ನು ಫಕ್ಕನೆ ಎತ್ತಿಕೊಂಡನು. ಇನ್ನೊಮ್ಮೆ ಬೀಸಿ ನೀರಿಗೆ ಎಸೆಯಬೇಕೆಂದಿ ದ್ದನು. ಅಷ್ಟರಲ್ಲಿ ಮಾರ್ಟಿನ್ ತನ್ನ ಎರಡೂ ಕೈಗಳಿಂದ ಬಾಬನ ಅಂಗಿಯನ್ನು ಹಿಡಿದು ಜಗ್ಗಿ ಅವನನ್ನು ನೆಲಕ್ಕೆ ಕೆಡವಿದನು! ಬಾಬ್ ನೆಲಕ್ಕೆ ಉರುಳುವ ರಭಸಕ್ಕೆ ಬೆಕ್ಕಿನ ಮರಿ ಅವನ ಕೈಯಿಂದ ಜಾರಿ ಬಿದ್ದು, ಸಮೀಪದಲ್ಲಿದ್ದ ಪೊದರನ್ನು ಸೇರಿ ಬಿಟ್ಟಿತು!

ಬಾಬ್ ನೆಲದ ಮೇಲೆ ಬಿದ್ದೇ ಇರುವನೇ? ಇಲ್ಲ, ಅವನು ಮಾರ್ಟಿನನಿಗಿಂತ ನಾಲ್ಕು ಪಟ್ಟು ಬಲಶಾಲಿ. ಕಣ್ಣು ಮುಚ್ಚಿ

ತೆರೆಯುವುದರೊಳಗೆ ಅವನು ಬಿದ್ದಲ್ಲಿಂದ ಎದ್ದು ಮಾರ್ಟಿನನನ್ನು ಕೆಡವಿ, ಅವನ ಎದೆಯ ಮೇಲೆ ಕುಳಿತು ಹೊಡೆಯುವುದರಲ್ಲಿದ್ದನು. ಅಷ್ಟರಲ್ಲಿ ಶಾಲೆಯ ಇತರ ಹುಡುಗರೂ ಅಲ್ಲಿ ಸೇರಿದ್ದರು. ಅವರೆಲ್ಲ ಒಂದೇ ಸ್ವರದಿಂದ "ನಾಚಿಕೆ, ನಾಚಿಕೆ," ಎಂದು ಬೊಬ್ಬಿಟ್ಟರು. "ಬಿದ್ದವರನ್ನು ಹೊಡೆಯುವುದು ನಾಚಿಕೆಕೇಡು, ಏಳು" ಎಂದು ಬಾಬನನ್ನು ಹಿಡಿದು ಎಳೆದರು. ಮಾರ್ಟಿನ್ ಎದ್ದು ನಿಂತು ಕೋಪದಿಂದ ಹಲ್ಲು ಕಡಿದನು. ಬಾ ನೋಡುವ. ಈಗ ಬಾ" ಎಂದು ಬಾಬ್ ಮಾರ್ಟಿನನನ್ನು ಹೋರಾಟಕ್ಕೆ ಕರೆದನು. "ಓಹೋ! ಬಾಬ್! ಬುದ್ಧಿವಂತ ಬಾಬ್! ನಿನ್ನಿಂದ ಸಣ್ಣವರೊಡನೆ ನಿನ್ನ ಪೌರುಷವೋ? ಬೆಳೆದ ಕೋಣನಂತಿರುವ ನೀನು ಸಣ್ಣ ಆಡಿನ ಮರಿಯಂತಿರುವ ಮಾರ್ಟಿನನೊಡನೆ ಹೊಯ್ದಾಡುವುದೇ? ನಿನ್ನಂತೆ ಬಳೆದ ಹುಡುಗರೊಡನೆ ನಿನ್ನ ತೋಳ ತೀಟೆಯನ್ನು ತೀರಿಸು" ಎಂದು ಸುತ್ತು ಕೂಡಿದ ಹುಡುಗರು ಕೂಗಿದರು. ಹುಡುಗರ ಮಾತು ಕೇಳಿ ಬಾಬನ ಸಿಟ್ಟು ನೆತ್ತಿಗೇರಿತು. "ಹಾಗಾದರೆ, ದೊಡ್ಡವರೇ ಬನ್ನಿ, ಬಳೆದವರೇ ಬನ್ನಿ, ಧೈರ್ಯವಿದ್ದವರು ಬನ್ನಿ." ಎಂದು ಬಾಬ್ ಎದೆ ಆಗಲಿಸಿ ನಿಂತನು. ಅಲ್ಲಿದ್ದ ಹುಡುಗರು ಬಾಬನ ಮಾತಿಗೆ ತುಸು ಅಳುಕಿದರು. ಮಾರ್ಟಿನ್ ಮಾತ್ರ ಹೆದರಲಿಲ್ಲ. ಮಾರ್ಟಿನ್ ಪ್ರಾಯದಲ್ಲಿ ಕಿರಿಯವನಾದರೂ ಬಾಬನಿಗಿಂತ ಧೈರ್ಯಶಾಲಿ. ತುಂಟನಾದರೂ ಬಾಬನಲ್ಲಿ ಒಂದು ಬಗೆಯ ಹೇಡಿತನವಿತ್ತು. ಅವನು ಮಾರ್ಟಿನನಷ್ಟು ಧೈರ್ಯಶಾಲಿಯಲ್ಲ. ಅದು ಮಾರ್ಟಿನನಿಗೆ ಗೊತ್ತು. ಇತರ ಹುಡುಗರು ಎಷ್ಟು ಹೇಳಿದರೂ ಕೇಳದೆ, ಇಬ್ಬರೂ ಮುಷ್ಟಿಯುದ್ಧಕ್ಕೆ ತಯಾರಾದರು. ಅಷ್ಟರಲ್ಲಿ ಪೊದರಿನೆಡೆ ಅವಿತಿದ್ದ ಬೆಕ್ಕಿನ ಮರಿ "ಮಿಯಾಂ" ಎಂದಿತು. ಬೆಕ್ಕಿನ ಮರಿಯ ಕೂಗು ಕೇಳಿ ಮಾರ್ಟಿನನ ಸಿಟ್ಟು ನೆತ್ತಿಗೆ ಏರಿ ಹೋಯಿತು. ಅವನು ಆಚೆ ಈಚೆ ನೋಡದೆ, ಕಣ್ಣು ಮುಚ್ಚಿ, ಬಾಬನ ಮೋರೆಯ

ಮೇಲೆ ಒಂದೇ ಸವನೆ ಹೊಡೆಯ ತೊಡಗಿದನು. ಬಾಬನೂ ಸುಮ್ಮಗಿರಲಿಲ್ಲ. ಅವನೂ ಎದುರಾಳಿಯನ್ನು ಧೈರ್ಯದಿಂದ ಎದುರಿಸಿದನು. ಒಬ್ಬರನ್ನೊಬ್ಬರು ಹಿಡಿದು ಉರುಡಾಡಿದರು; ಹೊಡೆದಾಡಿದರು; ಹೋರಾಡಿದರು. ಹರಿಯುತ್ತಿದ್ದ ಹಳ್ಳದ ಬದಿಯಲ್ಲಿ ಹೋರಾಡುತ್ತಿದ್ದ ಆ ತುಂಟ ಹುಡುಗರಿಗೆ ತಾವು ಎಲ್ಲಿ ಹೋರಾಡುತ್ತಿದ್ದೇವೆ ಎಂಬ ಪರಿವೆಯೇ ಇಲ್ಲ. ಉರುಳುತ್ತ ಉರುಳುತ್ತ ದಡಮ್ಮನೆ ಹರಿಯುತ್ತಿದ್ದ ಹಳ್ಳಕ್ಕೆ ಬಿದ್ದರು. ಮಾರ್ಟಿನನಿಗೆ ಈಜು ಬರುತ್ತಿತ್ತು. ಬಾಬನಿಗೆ ಈಜಾಟ ಸೊನ್ನೆ! ಅವನು ಹರಿಯುತ್ತಿದ್ದ ಹಳ್ಳದಲ್ಲಿ ಮುಳುಗುತ್ತ ಏಳುತ್ತ ನೀರು ಕುಡಿಯ ತೊಡಗಿದನು. ಬಾಬನ ಈ ಅಸಹಾಯ ಸ್ಥಿತಿಯನ್ನು ಕಂಡು ಸಿಟ್ಟಿನ ಭರದಲ್ಲಿದ್ದ ಮಾರ್ಟಿನನೂ ತಣ್ಣಗಾದನು. ಅವನು ಫಕ್ಕನೆ ಬಾಬನ ಕಡೆಗೆ ಈಜಾಡಿ ಆಗಲೇ ನೀರು ಕುಡಿದು, ಮೂರ್ಛೆಗೊಂಡಿದ್ದ ಬಾಬನನ್ನು ಹಿಡಿದು ಮೇಲಕ್ಕೆ ಎಳೆದು ತಂದನು. ಪ್ರಥಮ ಚಿಕಿತ್ಸೆಯನ್ನು ತಿಳಿದ ಹುಡುಗರೆಲ್ಲ ಒಟ್ಟು ಸೇರಿ ಬಾಬನು ಕುಡಿದಿದ್ದ ನೀರು ಕಾರಿಸಿ, ಕೈಕಾಲು ಮೈಗಳನ್ನು ತಿಕ್ಕಿ ಅವನು ಮೂರ್ಛೆ ತಿಳಿಯುವಂತೆ ಮಾಡಿದರು. ಮೂರ್ಛೆ ತಿಳಿದು ಎದ್ದ ಬಾಬನು ಮಾರ್ಟಿನನನ್ನು ಬಿಗಿಯಾಗಿ ಅಪ್ಪಿಕೊಂಡು, "ಮಾರ್ಟಿನ್! ನೀನು ನನ್ನನ್ನು ಬದುಕಿಸಿದೆ, ನಾನು ಸೋತೆ. ನೀನು ಗೆದ್ದೆ. ಇಂದಿನಿಂದ ನಾವು ಹಗೆಗಳಲ್ಲ; ಜೀವದ ಗೆಳೆಯರು" ಎಂದು ಹೇಳಿ ಮಾರ್ಟಿನನ ಕೈಕುಲುಕಿದನು. ಅಲ್ಲಿ ನೆರೆದಿದ್ದ ಹುಡುಗರೆಲ್ಲ ಸಂತೋಷದಿಂದ 'ಹುರ್ರಾ, ಹುರ್ರಾ' ಎಂದು ಬೊಬ್ಬೆ ಹಾಕಿ ಮನೆಯ ಕಡೆಗೆ ಹೊರಡತೊಡಗಿದರು.

ಶಾಲೆಯ ಹುಡುಗರ ಈ ಗಲಾಟೆಯನ್ನೆಲ್ಲ ನೋಡುತ್ತ, ಅಲ್ಲೇ ಒಂದು ಮರದ ಕೆಳಗೆ ನಾವಿಕನೊಬ್ಬನು ಕುಳಿತಿದ್ದನು. ಬಾಬ್ ಮಾರ್ಟಿನರ ಮಲ್ಲಯುದ್ಧವನ್ನು ಕಂಡು ಅವನು ಖುಶಿ ಪಟ್ಟಿದ್ದನು. ಹುಡುಗರ ಗಲಾಟೆಯನ್ನು ತಾನೂ ಹುಡುಗನಾಗಿ

ಆ ನಾವಿಕನು ನೋಡಿ, ಸಂತೋಷವನ್ನು ಅನುಭವಿಸಿದ್ದನು. ಆ ನಾವಿಕನು ಗಲಾಟೆ ನಿಂತು ರಾಜಿಯಾದೊಡನೆಯೇ ಅವರ ಬಳಿಗೆ ಬಂದನು. ಮಾರ್ಟಿನ್ ಬಾಬರ ಬೆನ್ನು ತಟ್ಟಿ "ಹುಶಾರು ಹುಡುಗರು! ಸಾಹಸಿಗಳು! ಧೈರ್ಯಶಾಲಿಗಳು!" ಎಂದು ಹೊಗಳಿದನು. "ಈ ಸಣ್ಣ ಹುಡುಗ, ಮಾರ್ಟಿನ್ ಅಲ್ಲವೇ ನಿನ್ನ ಹೆಸರು! ಬಾಬನಿಗಿಂತಲೂ ಹುಶಾರು, ನಿಮ್ಮನ್ನು ನೋಡಿ ಖುಶಿಯಾಯಿತು" ಎಂದು ಹೇಳಿ ಮಾರ್ಟಿನನ ಕಡೆಗೆ ತಿರುಗಿ, "ಮಾರ್ಟಿನ್, ನಿನ್ನ ಬೆಕ್ಕಿನ ಮರಿಯನ್ನು ತೆಗೆದುಕೋ, ಇನ್ನು ಹೋಗುವ. ನಾನೂ ನಿನ್ನೊಡನೆ ಬರುತ್ತೇನೆ." ಎಂದು ಮಾರ್ಟಿನನನ್ನು ಕರೆದುಕೊಂಡು ಹೊರಟನು.

ಮಾರ್ಟಿನನಿಗೆ ಆ ನಾವಿಕನಾರೆಂದು ಪರಿಚಯವಿಲ್ಲದಿದ್ದರೂ ಅವನ ಮಾತುಗಳಿಗೆ ಮನಸೋತವನಾಗಿ ಅವನ ಹಿಂದೆಯೇ ಹೊರಟನು. "ಮಾರ್ಟಿನ್, ನಾನು ಒಬ್ಬ ನಾವಿಕನೆಂದು ನಿನಗೆ ನನ್ನ ಉಡುಪಿನಿಂದಲೇ ತಿಳಿದಿರಬಹುದು. ಬಾರ್ನಿ ಎಂದು ನನ್ನ ಹೆಸರು. ನಾನು ಹಡಗಿನಲ್ಲಿ ಕೆಲಸ ಮಾಡುವವನು. ಎಷ್ಟೋ ದೇಶಗಳನ್ನು ಸಂಚರಿಸಿದವನು. ಎಷ್ಟೋ ಆಶ್ಚರ್ಯಗಳನ್ನು ಕಂಡವನು. ನಿನ್ನ ಉತ್ಸಾಹ ಧೈರ್ಯಗಳನ್ನು ನೋಡಿದರೆ ನೀನೂ ಉತ್ತಮ ನಾವಿಕನಾಗಬಹುದು. ನನ್ನ ಗೆಳೆಯನಾಗಬಹುದು. ನಿನಗೆ ಇಷ್ಟವಿದ್ದರೆ ಒಮ್ಮೆ ನಮ್ಮ ಹಡಗನ್ನು ಬಂದು ನೋಡು. ಬೇಕಾದರೆ ನಾಳೆಯೇ ಬಾ. ಹಡಗನ್ನೆಲ್ಲ ತೋರಿಸುತ್ತೇನೆ." ಎಂದು ಹಲವು ಹದಿನೆಂಟು ವಿಷಯ ಹೇಳಿ ತನ್ನ ಪರಿಚಯ ಮಾಡಿಕೊಟ್ಟನು. ಬಾರ್ನಿಯ ಮಾತು ಕೇಳಿ ಮಾರ್ಟಿನ್ ತಾನೂ ಹಡಗಿನಲ್ಲಿ ಕೆಲಸಕ್ಕೆ ಸೇರಿದರೆ ಆಗಬಹುದು. ತನ್ನ ಸಾಹಸಕ್ಕೆ ಬೇಕಾದ ಸಂದರ್ಭಗಳು ಒದಗಬಹುದು ಎಂದು ಯೋಚಿಸಿ, ಬಾರ್ನಿಯ ಮಾತಿಗೆ ಸಮ್ಮತಿಯ ಹೂಗುಟ್ಟಿದನು. ಹಾಗೇ ಮಾತಾಡುತ್ತ ಬಾರ್ನಿ ಮಾರ್ಟಿನನೊಡನೆ ಅವನ ಮನೆ ವರೆಗೂ

ಬಂದು, “ನಾಳೆ ಬಾ! ಮರೆಯ ಬೇಡ!” ಎಂದು ಮಾರ್ಟಿನನಿಗೆ ಹೇಳಿ ಹೊರಟು ಹೋದನು.

## ನಾಲ್ಕು

ಸಾಹಸ ಜೀವಿಯಾದ ಮಾರ್ಟಿನನಿಗೆ ಹಡಗಿನಲ್ಲಿ ನಾವಿಕ ನಾಗಬೇಕೆಂಬ ಆಸೆ ಮೊದಲೇ ಇತ್ತು. ಈಗ ಬಾರ್ನಿಯ ಗುರುತಾದ ಮೇಲೆ, ಅವನು ಹೇಳಿದ ಮಾತುಗಳನ್ನು ಕೇಳಿದ ಮೇಲೆ ಆ ಆಸೆ ಮತ್ತಷ್ಟು ಬೆಳೆಯಿತು. ಅವನು ತನ್ನ ಆಸೆಯನ್ನು ಅತ್ತೆ ದೊರತಿಯ ಮುಂದೆ ಬಿಚ್ಚಿದನು. ಆ ಹೆಂಗಸು ಅದಕ್ಕೆ ಒಪ್ಪುವಳೇ? ಇಲ್ಲ! “ಮಾರ್ಟಿನ್! ನೀನು ಇನ್ನೂ ಸಣ್ಣವನು. ಈಗ ಬೇಡ, ಮುಂದೆ ನೋಡುವ!” ಎಂದು ಮಾರ್ಟಿನನ ಆಸೆಯ ಕುಡಿಯನ್ನು ಮುರುಟಿಸಲು ನೋಡಿದಳು.

ಮಾರ್ಟಿನ್ ಮರುದಿನ ಬಾರ್ನಿ ಇದ್ದ ಹಡಗಿಗೆ ಹೋದನು. ಬಾರ್ನಿ ಅವನನ್ನು ಪ್ರೀತಿಯಿಂದ ಬರಮಾಡಿಕೊಂಡನು. ಹಡಗಿನ ಭಾಗವನ್ನೆಲ್ಲ ತೋರಿಸಿದನು. ಮಾರ್ಟಿನ್ ತನ್ನ ಮತ್ತು ತನ್ನ ಅತ್ತೆಯ ವಿಚಾರವನ್ನು ಬಾರ್ನಿಗೆ ತಿಳಿಸಿದನು. ಅದಕ್ಕೆ, “ಇರಲಿ ಮಾರ್ಟಿನ್, ಅತ್ತೆಯ ಮಾತನ್ನು ಮೀರಬಾರದು. ಅವಳೇ ನಿನ್ನನ್ನು ಸಾಕಿಸಲಹಿದವಳಲ್ಲವೇ? ಸ್ವಲ್ಪ ಕಾಲ ಕಳೆಯಲಿ. ನಾನು ಈ ಬಂದರಿಗೆ ಬಂದಾಗಲೆಲ್ಲ ನಿನ್ನನ್ನು ಕಾಣದೆ ಹೋಗುವುದಿಲ್ಲ. ನಾನು ಕಂಡ ಹೊಸ ದೃಶ್ಯಗಳನ್ನು, ತಿಳಿದ ಹೊಸ ವಿಷಯಗಳನ್ನು ನಿನಗೆ ತಿಳಿಸದೆ ಹೋಗುವುದಿಲ್ಲ” ಎಂದು ಮಾರ್ಟಿನನನ್ನು ಸಮಾಧಾನಪಡಿಸಿ ಹಿಂದೆ ಕಳುಹಿಸಿದನು.

ಮಾರ್ಟಿನ್ ಒಮ್ಮೆಗೆ ನಿರಾಶನಾಗಿ ಹಡಗದ ಸುದ್ದಿ ಬಿಟ್ಟು, ವಿದ್ಯಾಭ್ಯಾಸವನ್ನು ಮುಂದುವರಿಸಿದನು. ಅವನಿಗೆ ವ್ಯಾಕರಣವೆಂದರೆ ತಲೆನೋವು! ಚರಿತ್ರೆಯ ಪಾಠ ಬಂತೆಂದರೆ ಬೇಸರ! ಲೆಕ್ಕದ ಪಾಠಕ್ಕೆ ಮನಸ್ಸಿತ್ತು. ಭೂಗೋಳವೆಂದರೆ ಸಂತೋಷ!

ಮಾರ್ಕೊಪೋಲೋ, ಕೊಲಂಬಸ್ ಮುಂತಾದ ನಾವಿಕರ ವಿಚಾರ ಬಂದಾಗ ಜೀವ ಬಿಟ್ಟು ಕಲಿಯುತ್ತಿದ್ದ. ಅವರ ವಿಚಾರವಾಗಿ ಬಹಳ ಸಣ್ಣ ವಿಷಯ, ಸಾಮಾನ್ಯ ವಿಷಯ ಅವನಿಗೆ ತಿಳಿದಿತ್ತು. ಹಡಗು, ಹಡಗು ಸಂಚಾರ, ನಾವಿಕ ಜೀವನಗಳ ವಿಚಾರವಾಗಿ ಎಷ್ಟೆಲ್ಲ ತಿಳಿಯಲು ಸಾಧ್ಯವೋ ಅಷ್ಟನ್ನೆಲ್ಲ ತಿಳಿದುಕೊಂಡಿದ್ದನು.

ಮಾರ್ಟಿನ್ ತನ್ನ ಹದಿನಾಲ್ಕರ ಹರಯದ ವರೆಗೆ ವಿದ್ಯಾಭ್ಯಾಸವನ್ನು ಮುಂದುವರಿಸಿದನು. ಗಟ್ಟಿಮುಟ್ಟಾಗಿ ಗುಂಡು ಕಲ್ಲಿನಂತೆ ಬಳೆದನು. ಶಾಲೆಯಲ್ಲಿ ಅಧ್ಯಾಪಕರಿಗೂ, ವಿದ್ಯಾರ್ಥಿಗಳಿಗೂ ಅಚ್ಚುಮೆಚ್ಚಿನವನಾದನು. ತನ್ನ ಧೈರ್ಯ ಸಾಹಸಗಳಿಂದ, ಪರೋಪಕಾರಗಳಿಂದ ಮಾರ್ಟಿನ್ ಆ ಊರ ಜನರ ಹೊಗಳಿಕೆಗೆ ಪಾತ್ರನಾಗಿದ್ದನು. ಅವನು ತನ್ನಿಂದ ಸಾಧ್ಯವಾದ ಸಹಾಯಗಳನ್ನೆಲ್ಲ ಇತರರಿಗೆ ಕೊಡುತ್ತಿದ್ದನು.

## ಐದು

ಬಾಬನಿಗೂ ಮಾರ್ಟಿನನಿಗೂ ಬೆಕ್ಕಿನ ಮರಿಗಾಗಿ ಜಗಳವಾಗಿ ರಾಜಿಯಾದಂದಿನಿಂದ ಅವರಿಬ್ಬರೂ ಜೀವದ ಗೆಳೆಯರಾಗಿದ್ದರು. ಅವರು ಆಗಾಗ ಶಾಲೆ ಬಿಟ್ಟೊಡನೆ, ರಜೆಸಿಕ್ಕಿದಾಗ ಬಂದರಕ್ಕೆ ಹೋಗಿ, ಅಲ್ಲಿಗೆ ಬರುತ್ತಿದ್ದ ಹೋಗುತಿದ್ದ ಹಡಗುಗಳನ್ನು ನೋಡಿ ಬರುತ್ತಿದ್ದರು. ಮಾರ್ಟಿನನ ಗೆಳೆಯ ಬಾರ್ನಿ ಕೆಲಸಕ್ಕಿದ್ದ ಹಡಗು ಬಂದಾಗಲಂತೂ ಆ ಗೆಳೆಯರಿಬ್ಬರೂ ಅಲ್ಲಿಗೆ ಹೋಗದೆ ಇರಲು ಸಾಧ್ಯವೇ ಇರಲಿಲ್ಲ. ಬಾರ್ನಿಯೂ ಹಾಗೆಯೇ, ತಾನು ಹಡಗು ಸಂಚಾರ ಮುಗಿಸಿ ಬಂದರಿಗೆ ಬಂದಾಗ ಮಾರ್ಟಿನನ ಮನೆಗೆ ಬಾರದೆ, ಅವನನ್ನು ಹಡಗಿಗೆ ಕರೆದುಕೊಂಡು ಹೋಗದೆ ಇರುತ್ತಿರಲಿಲ್ಲ. ಬಾರ್ನಿ ಬಂದಾಗಲೆಲ್ಲ "ಹಡಗು ಸಂಚಾರಕ್ಕೆ ಬಾ" ಎಂದು ಒತ್ತಾಯಿಸುತ್ತಿದ್ದನು. ಬಾಬನೂ, "ಹೋಗೋ ಮಾರ್ಟಿನ್; ಅತ್ತೆ ಒಪ್ಪುವುದಿಲ್ಲವೆಂದು ಏಕೆ ಬೆಪ್ಪನ

ಹಾಗೆ ಕುಳಿತುಕೊಳ್ಳುವೆ? ನಿನಗೆ ಇಷ್ಟವಿದ್ದರೆ ಹೋಗಿಯೇ ಬಿಡು. ಹೋದಮೇಲೆ ಅತ್ತೆಗೆ ಹೇಗೂ ತಿಳಿಯುತ್ತದೆ ತಾನೇ, ಮತ್ತೇನು?" ಎಂದು ಮಾರ್ಟಿನನನ್ನು ಪ್ರೋತ್ಸಾಹಿಸುತ್ತಿದ್ದನು.

ಮಾರ್ಟಿನನ ಶಾಲೆಗೆ ರಜೆಯಿದ್ದ ಕಾಲವದು. ಆಗ ಎಂದಿನಂತೆ ಬಾರ್ನಿ ಇರುವ ಹಡಗು ಬಂದರಕ್ಕೆ ಬಂತು. ಮಾರ್ಟಿನನೂ ಬಾಬನೂ ಹಡಗ ನೋಡಲೆಂದು ಬಂದರಕ್ಕೆ ಹೋದರು. ಅವರು ಹೋಗುವಾಗ ಹಡಗು ಪ್ರಯಾಣಕ್ಕೆ ಸಿದ್ಧವಾಗಿತ್ತು. ಎಂದಿನಂತೆ ಮಾರ್ಟಿನ್ ಹಡಗು ಹತ್ತಿದ. ಹಡಗಿನ ನಾವಿಕರೆಲ್ಲ ಆಚೆ ಈಚೆ ಓಡಾಡುತ್ತ ತರಾತುರಿಯಲ್ಲಿದ್ದರು. ಪ್ರಯಾಣಿಕರಿಂದಲೂ, ಅವರನ್ನು ಕಳುಹಿಸಿಕೊಡಲು ಬಂದಿದ್ದ ಅವರ ಬಂಧು ಬಳಗದವರಿಂದಲೂ ಹಡಗು ತುಂಬಿ ಹೋಗಿತ್ತು. "ಹಡಗು ಹೊರಡುತ್ತದೆ. ಹಡಗಿನಲ್ಲಿ ಪ್ರಯಾಣ ಮಾಡುವವರನ್ನು ಬಿಟ್ಟು ಉಳಿದವರೆಲ್ಲ ಹೊರಟು ಹೋಗಿರಿ" ಎಂದು ಹಡಗಿನ ಕಪ್ತಾನ್ ಹೇಳಿದನು. ಕಪ್ತಾನನ ಅಪ್ಪಣೆಯಾದುದೇ ತಡ, ಹಡಗಿನಲ್ಲಿ ಹೋಗದವರೆಲ್ಲ ಬೇಗಬೇಗನೆ ಕೆಳಗಿಳಿಯತೊಡಗಿದರು. ಮಾರ್ಟಿನ್ ಅವರೊಡನೆ ಹೊರಟನು. ಆಗ ಬಾರ್ನಿ ಅವನ ಕೈಹಿಡಿದು, "ನಿಲ್ಲು, ಹಡಗು ರೇವು ದಾಟಿ ಸಮುದ್ರ ಸೇರುವ ವರೆಗೆ ನಮ್ಮೊಡನೆ ಬಾ. ಅಲ್ಲಿಂದ ಈಚೆಗೆ ಬರುವ ದೋಣಿಗಳು ಸಿಗುತ್ತವೆ. ಯಾವುದಾದರೂ ಒಂದು ದೋಣಿಯಲ್ಲಿ ದಡ ಸೇರಬಹುದು." ಎಂದು ಹೇಳಿ ಮಾರ್ಟಿನನನ್ನೂ ಬಾಬನನ್ನೂ ನಿಲ್ಲಿಸಿಕೊಂಡನು. ಆ ಹಡಗಿನ ಹೆಸರನ್ನೇ ಹೇಳಲಿಲ್ಲವಲ್ಲ! ಹೌದು, ಅದರ ಹೆಸರು "ಹಾರುವ ಬೆಂಕಿ". ದಕ್ಷಿಣ ಅಮೇರಿಕದ ಕಡೆಗೆ ಪ್ರಯಾಣ ಬೆಳೆಸುವ ಹಡಗವದು. ತುಸು ಹೊತ್ತಿನಲ್ಲೇ ಹಡಗದ ಹಾಯಿ ಬಿಚ್ಚಿದರು. ಹಡಗು ಸಮುದ್ರದ ಕಡೆಗೆ ಸರಿಯ ತೊಡಗಿತು. ಆಗ ಒಂದು ಅವಘಡ ಸಂಭವಿಸಿತು. ಅದು ಭರತದ ಕಾಲವಾಗಿರದೆ, ಇಳಿತದ ಕಾಲವಾಗಿತ್ತು. ಬಂದರಿನಲ್ಲಿ ನೀರು ಕಡಮೆ

ಯಾಗುತ್ತಿತ್ತು. ಹಡಗು ಚಲಿಸುವಷ್ಟು ನೀರು ಇಲ್ಲದ ಕಾರಣ ಹಡಗು ಒಂದು ಹೊಯಿಗೆಯ ದಂಡೆಗೆ ತಾಗಿ ನಿಂತು ಬಿಟ್ಟಿತು! ಇನ್ನು ಭರತ ಬಂದು ನೀರೇರುವಷ್ಟು ಕಾಲ ಹಡಗು ಕಾದು ನಿಲ್ಲ ಬೇಕಿತ್ತು!

ಹಡಗಿನ ಕೆಲಸಗಾರರೆಲ್ಲ ಅತ್ತಿತ್ತ ಓಡಾಡುತ್ತ ಇದ್ದಂತೆ ಯೇ ಬಾಬನು, "ಮಾರ್ಟಿನ್! ನಾವು ಒಂದು ಕೆಲಸ ಮಾಡುವ. ಇಲ್ಲಿ ನೋಡು, ನೀರ ಮೇಲೆ ತೇಲಾಡುತ್ತಿರುವ ದೋಣಿಗಳ ಕಡೆಗೆ ನೋಡು. ಅವು ಬಾಡಿಗೆ ದೋಣಿಗಳು. ನಾವೂ ಒಂದು ದೋಣಿಯನ್ನು ಬಾಡಿಗೆಗೆ ಹಿಡಿದು ಸುತ್ತಾಡುವ. ಈ ನಿಂತ ಹಡಗಿನಲ್ಲಿ ನಿಂತು ಮಾಡುವುದೇನು? ಸಂಜೆಯ ವೇಳೆಗೆ ದಡ ಸೇರಿದರಾಯಿತು" ಎಂದು ಸೂಚಿಸಿದನು. ಆಗ ಅಲ್ಲೇ, ಆ ನಿಂತ ಹಡಗಿನ ಸಮೀಪದಲ್ಲೇ ಬಾಬನ ಪರಿಚಯದ ಟಾಮ್ ಎಂಬ ವನು ಒಂದು ದೋಣಿಯಲ್ಲಿ ಕುಳಿತು ಸುತ್ತಾಡುತ್ತಿದ್ದನು. "ಟಾಮ್, ಇಲ್ಲಿ ಬಾ! ನಮಗೆ ದೋಣಿ ಬೇಕಾಗಿದೆ. ಇಲ್ಲಿ ಬಾ" ಎಂದು ಬಾಬ್ ಕರೆದನು. ಟಾಮ್ "ಹೊ" ಎನ್ನುತ್ತ ತನ್ನ ದೋಣಿಯನ್ನು ಹಡಗಿನ ಬಳಿಗೆ ತಂದು, ದೋಣಿಗೆ ಕಟ್ಟಿದ ಹಗ್ಗದ ತುದಿಯನ್ನು ಬಾಬನ ಕಡೆಗೆ ಎಸೆದು, ಬಲವಾಗಿ ಹಿಡಿದು ಕೊಳ್ಳಲು ಹೇಳಿ, ತಾನು ಹಡಗವನ್ನೇರಿದನು. ಬಾಬ್ ಹಗ್ಗ ವನ್ನು ಹಿಡಿದು ಕೊಂಡು, ಮಾರ್ಟಿನನನ್ನು ಮೊದಲು ದೋಣಿಗೆ ಇಳಿಯಲು ಹೇಳಿದನು. ಮಾರ್ಟಿನ್ ದೋಣಿಗೆ ಇಳಿದನೋ ಇಲ್ಲವೊ, ಎನ್ನುವಾಗ ಬಲವಾಗಿ ಗಾಳಿಬೀಸಿ, ದೋಣಿ ದೂಡಿ ದಂತಾಗಿ, ಬಾಬನ ಕೈಯಿಂದ ಹಗ್ಗ ಜಾರಿ ಹೋಯಿತು! ಇಳಿ ತದ ಕಾಲವಾದುದರಿಂದ, ಗಾಳಿ ಬಲವಾಗಿ ಬೀಸಿದುದರಿಂದ ದೋಣಿ ಮಾರ್ಟಿನನೊಬ್ಬನನ್ನೇ ಹೊತ್ತುಕೊಂಡು ಮುಂದುವರಿ ಯಿತು. ಸಮುದ್ರದ ಕಡೆಗೆ ರಭಸದಿಂದ ಸರಿಯಿತು. ಮಾರ್ಟಿನ್ ದೋಣಿಯ ಹುಟ್ಟನ್ನು ತೆಗೆದುಕೊಂಡು ದೋಣಿಯನ್ನು ಹಿಂದೆ

ತಿರುಗಿಸಲು ತನ್ನಿಂದ ಆದಷ್ಟು ಪ್ರಯತ್ನಿಸಿದನು. ಪ್ರಯೋಜನ ವಾಗಲಿಲ್ಲ.

ಬಾಬ್ ಬೊಬ್ಬೆ ಹೊಡೆದನು. ಆ ಗಲಾಟೆಯಲ್ಲಿ ಅವನ ಬೊಬ್ಬೆ ಯಾರಿಗೆ ಕೇಳಬೇಕು! ಕಡೆಗೆ ಬಾರ್ನಿಯ ಬಳಿಗೆ ಹೋಗಿ ಮಾರ್ಟಿನ್ ದೋಣಿಯಲ್ಲಿ ತೇಲಿಹೋದನೆಂದೂ ಅವನ ಸುಳಿವೇ ಕಾಣದೆಂದೂ ದೇಳಿದನು. ಬಾರ್ನಿ ಕೂಡಲೇ ಹಡಗಿನ ಮೇಲಿನ ಅಟ್ಟಕ್ಕೆ ಹೋಗಿ ದುರ್ಬೀನು ಹಿಡಿದು ನಾಲ್ಕು ಕಡೆಗೂ ನೋಡಿ ದನು. ಗಾಳಿಯ ರಭಸಕ್ಕೆ ದೋಣಿ ಬಹುದೂರ ಹೋಗಿತ್ತು. ದುರ್ಬೀನಿಗೂ ಕಾಣಿಸಲಿಲ್ಲ. ಬಾರ್ನಿ ನಿರಾಶನಾಗಿ ನಿಟ್ಟುಸಿರು ಬಿಟ್ಟನು. ಬಾಬನಿಗೆ ಮಾರ್ಟಿನ್ ಹೋದ ದುಃಖದಿಂದ ಕಣ್ಣೇ ಕಾಣಿಸದು. ಅವನು ಅಲ್ಲೇ ಬಳಿಯಲ್ಲಿದ್ದ ಬೆಸ್ತರ ದೋಣಿ ಹತ್ತಿ ದಡಕ್ಕೆ ಬಂದನು. ದಡದಲ್ಲಿದ್ದ ಬೆಸ್ತರೊಡನೆ ಮಾರ್ಟಿನ್ ಮಾಯವಾದ ಸುದ್ದಿಹೇಳಿ ಕಣ್ಣೀರು ಸುರಿಸಿದನು. ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಆಗ ಕತ್ತಲು ಕವಿದಿದ್ದುದ ರಿಂದಲೂ, ಗಾಳಿ ಅನುಕೂಲವಾಗಿರದೆ ವಿಪರೀತವಾಗಿದ್ದುದ ರಿಂದಲೂ ಯಾವ ಬೆಸ್ತನೂ ಸಮುದ್ರಕ್ಕೆ ಹೋಗಲು ಧೈರ್ಯಪಡ ಲಿಲ್ಲ. ಬಾಬ್ ಈ ದುಃಖದ ಸುದ್ದಿಯನ್ನು ಮಾರ್ಟಿನನ ಅತ್ತೆ ದೊರತಿಗೂ ತಿಳಿಸಿದನು. ಅಸಹಾಯಳಾದ ಆಕೆಗೆ ಜೀವವೇ ಹೋದಂತಾಯಿತು. ಅವಳು ಸುಮ್ಮಗೆ ಕಣ್ಣೀರು ಸುರಿಸಿದಳು.

ಸಮುದ್ರದಲ್ಲಿ ಭರತ ಬಂದು, ಅನುಕೂಲವಾದ ಗಾಳಿ ಬೀಸತೊಡಗಿದೊಡನೆಯೇ ಹಡಗು "ಹಾರುವ ಬೆಂಕಿ" ನೆಲಬಿಟ್ಟು ತೇಲತೊಡಗಿತು. ನಾವಿಕರು ಹಡಗನ್ನು ಸಮುದ್ರದ ಕಡೆಗೆ ಸರಿಸಿದರು. ಬಾರ್ನಿ ಕೂವೆಮರದ ತುದಿಗೇರಿ ದುರ್ಬೀನು ಹಿಡಿದು, ಆ ತಿಂಗಳು ಬೆಳಕಿನ ರಾತ್ರಿಯಲ್ಲಿ ಮಾರ್ಟಿನನ ಕುರುಹು ಎಲ್ಲಿಯಾದರೂ ಕಾಣುವುದೋ ಎಂದು ನೋಡುತ್ತಲೇ ಇದ್ದನು. ಎಷ್ಟೋ ಹೊತ್ತು ನೋಡಿದ ಮೇಲೆ ದೂರದಲ್ಲಿ, ಸಮುದ್ರದಲ್ಲಿ

ಕಪ್ಪಾದ ಒಂದು ವಸ್ತು ತೇಲುತ್ತಿದ್ದುದು ಕಾಣಿಸಿತು. ಆ ವಸ್ತು ಮಾರ್ಟಿನನ ದೋಣಿಯಾಗಿರಬಹುದೋ ಎಂದು ಚಿಂತಿಸಿ, ಬಾರ್ನಿ ಕಪ್ತಾನನೊಡನೆ ತನ್ನ ಊಹೆಯನ್ನು ಸೂಚಿಸಿದನು. ಕಪ್ತಾನನು ಕೂಡಲೇ ಒಂದು ದೋಣಿಯನ್ನು ಆ ಕಪ್ಪಾದ ವಸ್ತು ಕಾಣಿಸುತ್ತಿದ್ದಲ್ಲಿಗೆ ಕಳುಹಿಸಿದನು. ಇಬ್ಬರು ನಾವಿಕರು ದೋಣಿಯನ್ನು ಆದಷ್ಟು ವೇಗವಾಗಿ ನಡೆಸುತ್ತ ಆ ಕಪ್ಪಾದ ವಸ್ತು ವಿದ್ದೆಡೆಗೆ ಹೋದರು. ಅವರು ಊಹಿಸಿದಂತೆ ಅದು ಮಾರ್ಟಿನನ ದೋಣಿಯೇ ಆಗಿತ್ತು. ಬಿರುಗಾಳಿಗೆ ಸಿಕ್ಕಿದ ಆ ದೋಣಿಯಲ್ಲಿ ಮಾರ್ಟಿನ್ ಹೆದರಿ ಮುದುರಿ ಬಿದ್ದುಕೊಂಡಿದ್ದನು. ಅರ್ಧ ಗಂಟೆಯೊಳಗೆ ಮಾರ್ಟಿನನನ್ನು ಹಡಗಿಗೆ ತಂದರು. ಬಿಸಿ ಚಾ ಕೊಟ್ಟು ಉಪಚರಿಸಿದರು. ತುಸು ಹೊತ್ತಿನಲ್ಲಿಯೇ ಮಾರ್ಟಿನ್ ಚೇತರಿಸಿಕೊಂಡನು.

ಮಾರ್ಟಿನ್ ಈಗ ತಾನು ಬದುಕಿದೆನೆಂದೂ ಬಾರ್ನಿಯೊಡನೆ ಹಡಗಿನಲ್ಲಿ ಭದ್ರವಾಗಿದ್ದೇನೆಂದೂ ಧೈರ್ಯ ತಳೆದನು. ಮತ್ತೆ ತನ್ನನ್ನು ಊರಿಗೆ ಹಿಂದಿರುಗಿ ಕಳುಹಿಸಬೇಕೆಂದು ಕಪ್ತಾನನೊಡನೆ ಹೇಳಿದನು. "ಇನ್ನು ನಿನ್ನನ್ನು ಊರಿಗೆ ಹಿಂದಿರುಗಿಸಲು ಸಾಧ್ಯವಿಲ್ಲ. ಹಡಗು ದಡ ಬಿಟ್ಟು ಬಹುದೂರ ಬಂದು ಬಿಟ್ಟಿದೆ. ಇನ್ನು ಊರಿಗೆ ಹೋಗುವ ಆಸೆ ಬಿಡು. ನೀನು ನಮ್ಮೊಡನೆ ನಮ್ಮವನಾಗಿಯೇ ಇರು!" ಎಂದು ಕಪ್ತಾನ್ ಮಾರ್ಟಿನನನ್ನು ಸಮಾಧಾನ ಪಡಿಸಿ, "ಇನ್ನು ಹೋಗಿ ಮಲಗಿಕೋ" ಎಂದು ಮಲಗಲು ಹೇಳಿದನು. ಕಪ್ತಾನನ ಸೂಚನೆಯಂತೆ ಮಾರ್ಟಿನ್ ಗೆಳೆಯ ಬಾರ್ನಿ ತೋರಿಸಿದ ಹಾಸಿಗೆಯಲ್ಲಿ ಬಿದ್ದುಕೊಂಡನು. ಮನೆಯಲ್ಲಿ ತನ್ನ ಅತ್ತೆ ದೊರತಿ ಏನು ಮಾಡುವಳೋ? ಎಷ್ಟು ದುಃಖಿಸುವಳೋ? ಎಂಬ ಚಿಂತೆಯಿಂದ ಅವನಿಗೆ ಎಷ್ಟೋ ಹೊತ್ತಿನ ವರೆಗೆ ನಿದ್ದೆಯೇ ಬರಲಿಲ್ಲ; ಕಣ್ಣು ಮುಚ್ಚಲಿಲ್ಲ!

## ಆರು

ಸಮುದ್ರದ ನೀರಿನಲ್ಲಿ ತೇಲಾಡಿ, ಬಿರುಗಾಳಿಗೆ ಸಿಕ್ಕಿ ಹೆದರಿ ಹೋದ ಮಾರ್ಟಿನ್ ಎಚ್ಚತ್ತಾಗ ಹಡಗು ಸಮುದ್ರದಲ್ಲಿ ಮುಂದು ವರಿಯುತ್ತಲೇ ಇತ್ತು. ಆಗ ಬೆಳಕು ಹರಿದು, ಹೊತ್ತು ಏರ ತೊಡಗಿತ್ತು. ಮಾರ್ಟಿನ್ ಎದ್ದು ಕುಳಿತು, ಆಕಳಿಸುತ್ತ ಕಣ್ಣು ಉಜ್ಜಿಕೊಳ್ಳುತ್ತಿದ್ದಾಗ ಬಾರ್ನಿ ಬಂದು ಅವನನ್ನು ಹಡಗಿನ ಅಡುಗೆ ಮನೆಗೆ ಕರೆದುಕೊಂಡು ಹೋದನು. ಅಲ್ಲಿ ಮೋರೆ ತೊಳೆಯಲು ನೀರು ಕೊಟ್ಟು, ರೊಟ್ಟಿ, ಚಾ ಮೊದಲಾದುವನ್ನಿತ್ತನು. ಮತ್ತೆ ಹಡಗಿನ ಜೀವನ ಹೇಗೆಂದು ಹೇಳುತ್ತ ಮಾರ್ಟಿನನನ್ನು ಕಪ್ತಾನನ ಬಳಿಗೆ ಕರೆದುಕೊಂಡು ಹೋದನು. ಕಪ್ತಾನನಿಗೆ ಮಾರ್ಟಿನನನ್ನು ನೋಡಿ ಖುಶಿಯಾಗಿತ್ತು. ಅವನು ಮಾರ್ಟಿನನ ಬೆನ್ನು ತಟ್ಟಿ "ಮಾರ್ಟಿನ್, ಏನು? ಇನ್ನೂ ಊರಿಗೆ ಹೋಗುವ ಆಸೆ ಇದೆಯೋ? ಇದ್ದರೆ ಆ ಆಸೆಯನ್ನು ಬಿಟ್ಟು ಬಿಡು. ನೀನು ನಮ್ಮೊಡನೆ ಬಂದು ಎಷ್ಟೋ ವಿಷಯಗಳನ್ನು ತಿಳಿಯಲಿದೆ, ಎಷ್ಟೋ ಆಶ್ಚರ್ಯಗಳನ್ನು ಕಾಣಲಿದೆ, ಎಷ್ಟೋ ಸಾಹಸಗಳನ್ನು ಮಾಡಲಿದೆ. ನಿನ್ನನ್ನು ನನ್ನ ಬಳಿಯಲ್ಲೆ ನನ್ನ ಪರಿಕರ್ಮಿಯಾಗಿ ನೇಮಿಸುತ್ತೇನೆ." ಎಂದು ಹೇಳಿ, ಬಾರ್ನಿಯೊಡನೆ ಮಾರ್ಟಿನನಿಗೆ ನಾವಿಕರ ಉಡುಪನ್ನು ಕೊಡಲು ಹೇಳಿದನು. ಹತ್ತು ಮಿನಿಟಿನಲ್ಲಿ ಮಾರ್ಟಿನ್ ನಾವಿಕರ ವಸ್ತ್ರ ಧರಿಸಿ, ಕಪ್ತಾನನ ಆಫೀಸಿನಲ್ಲಿ ಹಾಜರಾದನು. ಅಲ್ಲಿ ಕಪ್ತಾನ್ ಹೇಳಿದ ಕೆಲಸಗಳನ್ನೆಲ್ಲ ಅಚ್ಚುಕಟ್ಟಾಗಿ ಮಾಡುತ್ತ ಕಪ್ತಾನನ ಅಚ್ಚುಮೆಚ್ಚಿನ ಸೇವಕನಾದನು.

ಹಡಗು ಹಲವು ದಿನಗಳ ಪ್ರಯಾಣ ಮುಗಿಸಿತು. ದಕ್ಷಿಣ ಅಮೇರಿಕದ ತೀರ ಪ್ರದೇಶಗಳು ಕಾಣಿಸಿದುವು. ಆಗಲೇ ಮಾರ್ಟಿನನಿಗೆ ಹಡಗಿನ ಜೀವನ ಒಗ್ಗಿತ್ತು. ಅವನು ಸುಖವಾಗಿ ದಿನಕಳೆಯತೊಡಗಿದ್ದನು. ಒಂದು ದಿನ ಸಂಜೆಯ ವೇಳೆ ಗಾಳಿ

ಬಲವಾಗಿ ಬೀಸತೊಡಗಿತು. ಆಗ ಕಪ್ತಾನ್ ಕೂವೆಮರವನ್ನೇರಿ ದುರ್ಬೀನು ಹಿಡಿದು ನಾಲ್ಕು ಕಡೆಗೂ ನೋಡುತ್ತಿದ್ದನು. ಆಗ ದೂರದಲ್ಲಿ ಒಂದು ಹಡಗು ಕಾಣಿಸಿತು. ಅದು 'ಹಾರುವ ಬೆಂಕಿ' ಹಡಗವನ್ನೇ ಹಿಂಬಾಲಿಸುವಂತೆ ತೋರುತ್ತಿತ್ತು. ಕಪ್ತಾನ್ ಆದಷ್ಟು ಜಾಗ್ರತೆಯಿಂದ ಪರೀಕ್ಷಿಸಿದಾಗ ಅದು ಸಮುದ್ರಕಳ್ಳರ ಹಡಗಾಗಿರಬಹುದೆಂದು ತೋರಿತು. ಆಗ ಅವನು ಹಡಗು ನಡೆಸುತ್ತಿದ್ದ ಅಧಿಕಾರಿಯನ್ನು ಕರೆದು, "ಸಮುದ್ರ ಕಳ್ಳರ ಹಡಗೊಂದು ನಮ್ಮನ್ನು ಹಿಂಬಾಲಿಸಿಬರುವಂತೆ ತೋರುತ್ತದೆ. ನಮ್ಮ ಹಡಗಿನ ದಾರಿ ಬೇರೆ ಮಾಡು. ಎಡಕ್ಕೆ ತಿರುಗಿಸು. ಆದಷ್ಟು ಬೇಗನೆ ದಡ ಸೇರುವ. ಹೇಗಾದರೂ ಬದುಕಿಕೊಳ್ಳುವ" ಎಂದು ಕೂಗಿ ಹೇಳಿದನು.

ಕಪ್ತಾನ್ ಹೇಳಿದ ಅಪಾಯ ಸೂಚನೆಯನ್ನು ಆ ಅಧಿಕಾರಿ ಇತರ ನಾವಿಕರಿಗೆ ತಿಳಿಸಿದನು. ಇತರ ನಾವಿಕರೆಲ್ಲ ಒಟ್ಟು ಸೇರಿ ಹಡಗನ್ನು ಎಡಕ್ಕೆ ತಿರುಗಿಸಿ, ಆದಷ್ಟು ವೇಗವಾಗಿ ನಡೆಸತೊಡಗಿದರು. ಸಮುದ್ರಕಳ್ಳರ ಕಪ್ಪು ಪತಾಕೆಯ ಹಡಗು ಈ ಹಡಗಿಗಿಂತಲೂ ವೇಗವಾಗಿ ಬರುತ್ತಿತ್ತು. ಇನ್ನೇನು, ದಡ ಸೇರಲು ಹೆಚ್ಚು ಹೊತ್ತು ಬೇಡ, ತುಸು ಹೊತ್ತಿನಲ್ಲೇ ದಡ ಸೇರಬಹುದು ಎನ್ನುವಷ್ಟರಲ್ಲಿ ಕಳ್ಳರ ಹಡಗಿನಿಂದ ಗುಂಡು ಹಾರಿಸಿದ್ದು ಕೇಳಿಸಿತು. ಸದ್ದಿನೊಂದಿಗೆ 'ಹಾರುವ ಬೆಂಕಿ'ಯ ಕೂವೆಮರ ತುಂಡಾಗಿ ಹಾರಿ ಹೋಯಿತು! ಹಾಯಿ ಹರಿಯಿತು! ಅಷ್ಟರಲ್ಲಿ ಇನ್ನೊಂದು ಗುಂಡು! ಹಡಗು ಅಡಿಮೇಲಾಗತೊಡಗಿತು! ಇವರೂ ಪ್ರತಿ ಗುಂಡು ಹಾರಿಸಿದರು. ಕಳ್ಳರ ಹಡಗು ಮತ್ತಷ್ಟು ಹತ್ತಿರ ಬಂದಾಗಿತ್ತು. 'ಹಾರುವ ಬೆಂಕಿ'ಯ ಕಪ್ತಾನ್, "ನಮ್ಮ ದೋಣಿಗಳನ್ನು ಬೇಗನೇ ಕೆಳಗಿಳಿಸಿರಿ. ಹೇಗಾದರೂ ತಪ್ಪಿಸಿಕೊಳ್ಳುವ. ಹಡಗಿನ ಆಸೆ ಇನ್ನು ಬೇಡ" ಎಂದು ದೋಣಿಗಳನ್ನು ಕೆಳಗಿಳಿಸಲು ಹೇಳಿದನು. ಹಾಗೆಯೇ ನಾವಿಕರು ಅವಸರ ಅವಸರವಾಗಿ

ಹಡಗಿನಿಂದ ದೋಣಿಗಳನ್ನು ಕೆಳಗಿಳಿಸಿ, ಅವುಗಳಲ್ಲಿ ಕುಳಿತು ಕಳ್ಳರ ಕೈಯಿಂದ ತಪ್ಪಿಸಿಕೊಳ್ಳಲು ಯತ್ನಿಸಿದರು. ಅಷ್ಟರಲ್ಲಿ ಕಳ್ಳರೂ ದೋಣಿಗಳಲ್ಲಿ ಕುಳಿತು ಇವರನ್ನು ಬೆನ್ನಟ್ಟತೊಡಗಿದರು. ಕತ್ತಲಾದುದರಿಂದ ತಾವು ಎತ್ತ ಹೋಗುತ್ತೇವೆ, ಏನು ಮಾಡುತ್ತೇವೆ ಎಂಬುದೊಂದೂ ಅವರಿಗೆ ತಿಳಿದಿರಲಿಲ್ಲ. ಜೀವದಾಸೆಯಿಂದ ಸಿಕ್ಕಲ್ಲಿ ದೋಣಿ ನಡೆಸುತ್ತಿದ್ದರು.

'ಹಾರುವ ಬೆಂಕಿ'ಯ ನಾವಿಕರು ಹೀಗೆ ಚಲ್ಲಾಪಿಲ್ಲಿಯಾಗಿ ಗಲಿಬಿಲಿಯುಲ್ಲಿದ್ದಾಗ ಬಾರ್ನಿಯೂ ಮಾರ್ಟಿನನೂ ಒಂದೇ ದೋಣಿಯಲ್ಲಿ ಕುಳಿತಿದ್ದರು. ಅವರ ಸಾಮಾನುಗಳ ಗಂಟು ಅವರ ಬೆನ್ನ ಮೇಲೆಯೇ ಇತ್ತು. ಈ ಗಲಾಟೆಯಲ್ಲಿ ತುಸು ದೂರ ಹೋದಾಗ ಬಾರ್ನಿ ಮೆಲ್ಲಗೆ ಮಾರ್ಟಿನನ ಕಿವಿಯಲ್ಲಿ "ಮಾರ್ಟಿನ್, ನಾವು ಸಮುದ್ರಕಳ್ಳರ ಕೈಯಿಂದ ತಪ್ಪಿಸಿ ಬದುಕಿಕೊಳ್ಳುವ ಆಸೆ ನನಗೆ ತೋರುವುದಿಲ್ಲ. ನಿನಗೂ ಈಜು ಬರುತ್ತದೆ. ನಾವೀಗ ಮೆಲ್ಲಗೆ ನೀರಿಗೆ ಹಾರಿ, ಈಜಾಡಿ ದಡ ಸೇರಿ ಬದುಕಿಕೊಳ್ಳುವ. ದಡ ಸಮೀಪದಲ್ಲೇ ಇರಬೇಕು. ಹೇಗೆ?" ಎಂದನು. ಮಾರ್ಟಿನನೂ ಅದಕ್ಕೆ ಸಮ್ಮತಿಸಿದನು. ಇಬ್ಬರೂ ಮೆಲ್ಲಗೆ ಸಮುದ್ರಕ್ಕೆ ಹಾರಿದರು. ಆಗ ಅವರು ಕುಳಿತಿದ್ದ ದೋಣಿ ತುಸು ಅಲುಗಾಡಿದಂತಾಯಿತು. ದೋಣಿಯಲ್ಲಿ ಕುಳಿತ ಇತರ ನಾವಿಕರಿಗೆ ದೋಣಿ ಅಲುಗಾಡಿದರೂ, ಮಾರ್ಟಿನ್ ಮತ್ತು ಬಾರ್ನಿ ದೋಣಿಯಿಂದ ತಪ್ಪಿಸಿಕೊಂಡುದು ಆ ಕತ್ತಲಲ್ಲಿ ಕಾಣಿಸಲಿಲ್ಲ. ದೋಣಿಯಿಂದ ತಪ್ಪಿಸಿಕೊಂಡ ಮಾರ್ಟಿನನೂ ಬಾರ್ನಿಯೂ ಎಷ್ಟೋ ಹೊತ್ತಿನ ವರೆಗೆ ಈಜಾಡಿ ಕಡೆಗೆ ಹೇಗೂ ದಡ ಸೇರಿದರು.

## ಏಳು

ಬಾರ್ನಿಯೂ ಮಾರ್ಟಿನನೂ ತಾವು ದಕ್ಷಿಣ ಅಮೇರಿಕದ ಯಾವುದೋ ಒಂದು ದಡವನ್ನು ಸೇರಿದ್ದೇವೆಂದು ವೃಥ ಮಾಡಿ

ಕೊಂಡರು. ಆಗ ಅವರ ಅದೃಷ್ಟ ಒಳ್ಳೆಯದಾಯಿತೋ ಏನೋ, ಆಕಾಶದಲ್ಲಿ ಕವಿದಿದ್ದ ಮೋಡಗಳು ಮಾಯವಾಗಿ ನಕ್ಷತ್ರಗಳು ಮಿನುಗ ತೊಡಗಿದುವು! ಅವರು ತಮ್ಮ ಒದ್ದೆ ಉಡುಪುಗಳನ್ನು ಕಳಚಿ, ನೀರು ಹಿಂಡಿ, ಸಮುದ್ರ ತೀರದ ಮರಳ ದಂಡೆಯ ಮೇಲೆ ಆರಲು ಹಾಕಿದರು. ತಮ್ಮ ಗಂಟು ಬಿಚ್ಚಿ ಸಾಮಾನುಗಳೆಲ್ಲ ಸರಿಯಾಗಿವೆಯೋ ಎಂದು ನೋಡಿದರು. ಬಾರ್ನಿಗೆ ಅವನ ಪಿಸ್ತೂಲೆಂದರೆ ಜೀವ. ಅವನು ಮೊದಲು ಗಂಟು ಬಿಚ್ಚಿ ಅದನ್ನೇ ತೆಗೆದು ಸರಿಯಾಗಿದೆಯೋ ಎಂದು ನೋಡಿ ಸಮಾಧಾನಮಾಡಿಕೊಂಡನು.

ಮಳೆ ಮೋಡ ಕಡಿಮೆಯಾಗಿ, ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿದ್ದುದರಿಂದ ತುಸು ಮಂಜುಬೆಳಕು ಆ ಸಮುದ್ರದ ದಂಡೆಯ ಮೇಲೆ ಹರಡಿತ್ತು. ಅವರು ಅಲ್ಲೇ ಕುಳಿತು ಸರಿಯಾಗಿ ನೋಡಿದಾಗ ಆ ಮರಳ ದಂಡೆಯಲ್ಲಿ ಸುಮಾರು ಎರಡು ಫರ್ಲಾಂಗಿನಾಚೆ ಕಾಡು ಬೆಳೆದಿದ್ದುದು ಗೋಚರಿಸಿತು; ಮತ್ತು ಅದೊಂದು ನಿರ್ಜನ ಪ್ರದೇಶವೆಂದೂ ಖಚಿತವಾಯಿತು. ಅವರು ಚಳಿಯಿಂದ ಪಾರಾಗಲಿಕ್ಕಾಗಿ ಅಲ್ಲಿ ಬಿದ್ದಿದ್ದ ಅರೆಹಸಿ ಕಸಕಡ್ಡಿಗಳನ್ನು ಹೆಕ್ಕಿ, ತಮ್ಮ ಬಳಿಯಲ್ಲಿದ್ದ ಚಕಮುಕಿ ಕಲ್ಲಿನ ಸಹಾಯದಿಂದ ಬೆಂಕಿ ಉರಿಸಿದರು. ಮೈ ಕೈ ಬಿಸಿಮಾಡುತ್ತ, ಈ ನಾಡು ಎಂತಹದೋ, ಇಲ್ಲಿ ಇನ್ನೇನು ಕಾದಿದೆಯೋ ಎಂದು ಯೋಚಿಸುತ್ತಿರುವಾಗಲೇ ಆ ಕಾಡಿನಿಂದ ಒಂದು ಭಯಂಕರವಾದ ಕೂಗು ಕೇಳಿಸಿತು. ಆ ಕೂಗು ನರರದೋ, ವಾನರರದೋ, ಮೃಗಗಳದೋ, ರಾಕ್ಷಸರದೋ, ಎಂದು ಹೇಳಲು ಬರುವಂತಿಲ್ಲ. "ಏನೇ ಆಗಲಿ, ಬೆಳಗಾಗುವ ವರೆಗೆ ನಾವಿಲ್ಲಿಂದ ಹೊರಡುವ ಆಸೆ ಬೇಡ. ಯಾವ ಕಷ್ಟ ಬಂದರೂ ಇಲ್ಲಿಗೇ ಬರಲಿ." ನೀನು ನನ್ನ ಈ ಕಾಲುಚೀಲಗಳನ್ನು ಬೆಂಕಿಯಲ್ಲಿ ಒಣಗಿಸುತ್ತಿರು. ನಾನು ಕಾಡಿನ ಅಂಚಿಗೆ ಹೋಗಿ ಸ್ವಲ್ಪ ಒಣಕಡ್ಡಿ ಹೆಕ್ಕಿ ತರುತ್ತೇನೆ."

ಎಂದು ಬಾರ್ನಿ ಕುಳಿತಲ್ಲಿಂದ ಎದ್ದು ಸಮೀಪದಲ್ಲೇ ಕಾಣಿಸು ತ್ತಿದ್ದ ಕಾಡಿನ ಕಡೆಗೆ ಹೋದನು.

ಬಾರ್ನಿ ಕಾಡಿನ ಬಳಿ ಹೋಗಿ ನಾಲ್ಕಾರು ಒಣಕಡ್ಡಿಗಳನ್ನು ಹೆಕ್ಕಿದ್ದನೋ ಇಲ್ಲವೋ, ಮೊದಲಿನಂತೆಯೇ ಕ್ರೂರವಾದ ಕೂಗು ಕೇಳಿಸಿತು. ಆ ಕೂಗಿಗೆ ಬಾರ್ನಿಯ ಎದೆ ನಡುಗಿತು. ಅವನು ಒಂದು ಕ್ಷಣ ತಬ್ಬಿಬ್ಬಾದ. ಅಷ್ಟು ಹೊತ್ತಿಗೆ ಒಂದು ದೊಡ್ಡ ಬಾವಲಿ ಅವನ ಎದುರಿಗೇ ಹಾರಾಡಿತು. ಅಷ್ಟು ದೊಡ್ಡ ಬಾವಲಿ ಯನ್ನು ಆತನು ಎಂದೂ ಕಂಡಿರಲಿಲ್ಲ. ಆ ಬಾವಲಿ ಇನ್ನೊಮ್ಮೆ ಈಚೆ ಬಂದಾಗ ಹೊಡೆದು ಬಿಡಬೇಕೆಂದು ತನ್ನ ಕೈಯಲ್ಲಿದ್ದ ಕತ್ತಿ ಯನ್ನು ಎತ್ತಿ ಹಿಡಿದು ನಿಂತನು. ಬಾವಲಿ ಇನ್ನೊಮ್ಮೆ ಎದುರಿಗೇ ಹಾರಿತು. ಬಾರ್ನಿ ಕತ್ತಿ ಬೀಸಿ ಹೊಡೆದನು. ಬೀಸಿದ ಕತ್ತಿ ಎದುರಿಗಿದ್ದ ಮರದ ಕೊಂಬೆಗೆ ತಾಗಿ, ಮರದಲ್ಲಿದ್ದ ಹಣ್ಣುಗಳು ದಡಬಡನೆ ಬಾರ್ನಿಯ ತಲೆಯ ಮೇಲೆ, ಹೆಗಲಿನ ಮೇಲೆ ಉದುರಿದವು. ಮೊದಲೇ ಹೆದರಿದ್ದ ಬಾರ್ನಿ ಇದರಿಂದ ಮತ್ತಷ್ಟು ಹೆದರಿ, "ಅಯ್ಯೋ!" ಎಂದು ಹಿಂದಕ್ಕೆ ಸರಿದು, ಮಾರ್ಟಿನ್ ಕುಳಿ ತಲ್ಲಿಗೆ ಓಡತೊಡಗಿದನು. ಬಾರ್ನಿ ಹಾಗೆ ಹೆದರಿ ಓಡುತ್ತಿದ್ದಾಗ ಒಂದು ಹಾವಿನ ತಲೆಯನ್ನು ಮೆಟ್ಟಿದನು. ಆಗಲೇ ಅದು ಅವನ ಕಾಲಿಗೆ ಸುತ್ತಿಕೊಂಡಿತು. ಆಗ ಬಾರ್ನಿ ಮತ್ತಷ್ಟು ಹೆದರಿ ಬೊಬ್ಬಿಡುತ್ತ ಕಾಲು ಕೊಡಹಿ ಹಾವಿನ ಕೈಯಿಂದ ಬಿಡಿಸಿಕೊಂಡು, ಸಮುದ್ರದ ಕಡೆಗೆ ಓಡಿ ಮೊಳಕಾಲು ಮುಳುಗುವಷ್ಟು ನೀರಿ ಗಿಳಿದು ನಡುಗುತ್ತ ನಿಂತನು. ಬಾರ್ನಿಯ ಈ ಸ್ಥಿತಿಯನ್ನು ನೋಡಿ ಮಾರ್ಟಿನನೂ ಗಾಬರಿಗೊಂಡು ಅವನ ಬಳಿಗೋಡಿ, ಕೈ ಹಿಡಿದು, ಉರಿಯುತ್ತಿದ್ದ ಬೆಂಕಿಯ ಬಳಿಗೆ ಕರೆತಂದು ಸಂಗತಿ ಯೇನೆಂದು ವಿವರಿಸಿದನು.

ಬಾರ್ನಿ ನಡೆದ ಸಂಗತಿಯನ್ನೆಲ್ಲ ವಿವರಿಸಿ, "ಈ ಪ್ರದೇಶ ದಲ್ಲಿ ತುಂಬಾ ಭೂತ ಪಿಶಾಚಿಗಳು ತುಂಬಿವೆ ಎಂದು ತೋರು

ತ್ತದೆ. ನಾವು ಇಲ್ಲಿರುವುದು ಹೇಗೋ?" ಎಂದು ನಿಟ್ಟುಸಿರು ಬಿಟ್ಟನು. "ಏನು ಭೂತ! ಏನು ಪಿಶಾಚಿ! ಭೂತವೂ ಇಲ್ಲ, ಪಿಶಾಚಿಯೂ ಇಲ್ಲ. ಇದ್ದರೆ ನನ್ನ ಎದುರಿಗೆ ಬರಲಿ, ನಾನು ಅವುಗಳೊಡನೆ ಹೋರಾಡುವೆನು; ಕಾದಾಡುವೆನು. ನೀನು ಹೆದರ ಬೇಡ" ಎಂದು ಬಾರ್ನಿಯನ್ನು ಸಮಾಧಾನ ಪಡಿಸಿ, "ಈಗ ಬೆಂಕಿ ಆರುತ್ತದೆ, ಮತ್ತೆ ಚಳಿಯಿಂದ ನಡುಗಬೇಕು. ಬಾ! ಕಾಡಿನ ಬಳಿಗೆ ಹೋಗಿ ಕಟ್ಟಿಗೆ ತರುವ, ಬರಿ ಕಾಲಿನಲ್ಲಿ ಹೋಗುವುದು ಬೇಡ, ಮೊಚ್ಚೆಗಳನ್ನು ಮೆಟ್ಟಿಕೊಳ್ಳಬೇಕು. ಹಾವುಗಳಿವೆಯೆಂದು ನೀನೇ ಹೇಳಿರುವೆ. ಕಾಲಿಗೆ ಮೊಚ್ಚೆಗಳಿದ್ದರೆ ಹಾವುಗಳಿಗೆ ಅಷ್ಟೊಂದು ಹೆದರ ಬೇಕಾಗಿಲ್ಲ." ಎಂದು ಮಾರ್ಟಿನ್ ಕುಳಿತಲ್ಲಿಂದ ಎದ್ದು ಕಾಡಿನ ಕಡೆಗೆ ಹೊರಟನು. ಬಾರ್ನಿಯೂ ಅವನನ್ನು ಅನುಸರಿಸಿದನು.

ಬಾರ್ನಿ ಮಾರ್ಟಿನನೊಂದಿಗೆ ಕಾಡಿನ ಬಳಿಗೆ ಹೋಗಿ ತಾನು ಮೊದಲು ಒಟ್ಟು ಕೂಡಿಸಿ ಬಿಟ್ಟು ಬಂದಿದ್ದ ಕಟ್ಟಿಗೆಯನ್ನು ತಂದು ಬೆಂಕಿಯನ್ನು ಮತ್ತಷ್ಟು ಚೆನ್ನಾಗಿ ಉರಿಸಿದನು. ಬೆಂಕಿ ಉರಿಸಿ, "ಮುಂದೇನು ಮಾಡುವುದು? ಎಲ್ಲಿಗೆ ಹೋಗುವುದು?" ಎಂದು ಯೋಚಿಸುತ್ತ ಕುಳಿತಿದ್ದಾಗ ಮಿಂಚು ಕಂಡಿತು, ಗುಡುಗು ಗುಡುಗಿತು. ತಂಪಾದ ಗಾಳಿ ರಭಸದಿಂದ ಬೀಸತೊಡಗಿತು, ಕರಿ ಮೋಡಗಳು ಆಕಾಶವನ್ನೆಲ್ಲ ಮುಸುಕಿಕೊಂಡವು! "ಮಾರ್ಟಿನ್, ಉಷ್ಣವಲಯದ ಬಿರುಗಾಳಿ ಬಿರುಮಳೆಗಳ ಅನುಭವ ನಿನಗಿರ ಲಿಕ್ಕಿಲ್ಲ. ಇನ್ನು ಅರೆ ಗಳಿಗೆಯಲ್ಲಿ ಅವುಗಳ ಅನುಭವವಾಗ ಬಹುದು. ನಾವಿಲ್ಲಿಂದ ಹೊರಡಬೇಕು. ಏನೇ ಆಗಲಿ, ಈ ಕಾಡಿನ ದಾರಿ ಹಿಡಿದು ಮುಂದುವರಿಯುವ." ಎಂದು ಹೇಳಿ ಬಿಚ್ಚಿಟ್ಟಿದ್ದ ಗಂಟನ್ನು ಕಟ್ಟಿ ಎದ್ದನು. ಮಾರ್ಟಿನನೂ ತನ್ನ ಗಂಟನ್ನು ಎತ್ತಿಕೊಂಡು ಬಾರ್ನಿಯನ್ನು ಅನುಸರಿಸಿದನು. ಅವರಿಬ್ಬರೂ ಆ ಕಾಡಿನ ಬಳಿ ಮುಟ್ಟಿದ್ದರೋ ಇಲ್ಲವೋ, ಬಿರುಗಾಳಿ

ಗುಡುಗು, ಮಿಂಚು ಹೆಚ್ಚಿತು. ಭರ್ರನೆ ಮಳೆ ಸುರಿಯುತೊಡಗಿತು. ಇನ್ನೇನು ಮಾಡುವುದು? ಆ ಬಿರುಗಾಳಿಗೆ, ಭಯಂಕರ ಗುಡುಗು ಮಿಂಚಿಗೆ, ಬಿರುಮಳೆಗೆ ಹೋಗುವುದೆಲ್ಲಿಗೆ? ಮಳೆ ಕಡಮೆಯಾಗುವವರೆಗೂ ಒಂದೆರಡು ಗಳಿಗೆ ಹೊತ್ತು ಅವರು ಆ ಕಾಡಿನ ಬದಿಯಲ್ಲಿ ಮಳೆಗೆ ನೆನೆಯುತ್ತ ಸುಮ್ಮಗೆ ನಿಂತು ಬಿಟ್ಟರು. ಬಿರುಗಾಳಿ ನಿಂತೊಡನೆಯೇ ಮೋಡಗಳು ಚದರಿ ಆಕಾಶವು ಶುಭ್ರವಾಗಿ ನಕ್ಷತ್ರಗಳು ಕಾಣಿಸತೊಡಗಿದವು. ಮಾರ್ಟಿನ್ ಮತ್ತು ಬಾರ್ನಿ ಅಲ್ಲಿ ನಿಲ್ಲದೆ ಆದುದಾಗಲೆಂದು ಕಾಡಿನೊಳಗೆ ಮುಂಮುವರಿದು, ಒಂದು ಅರ್ಧ ಮೈಲಿನಷ್ಟು ನಡೆದು ಒಂದು ವಿಶಾಲವಾದ ಬಯಲಿಗೆ ಬಂದರು. ಆಗ ಸುಮಾರು ಜಾವ ರಾತ್ರಿ ಕಳೆದಿತ್ತು! ಅವರು ಅಲ್ಲೇ ಇದ್ದ ಒಂದು ಮರದ ಬುಡದಲ್ಲಿ ತಮ್ಮ ಗಂಟು ಮೂಟೆಯಿಟ್ಟು ಮರಕ್ಕೆ ಒರಗಿ ಕುಳಿತರು. ಈ ನಿರ್ಜನ ಪ್ರದೇಶದಲ್ಲಿ ಹೇಗೆ ಬೆಳಗು ಮಾಡುವುದೆಂದು ಯೋಚಿಸುತ್ತ, ಚಳಿಯಿಂದ ನಡುಗುತ್ತ ನಿದ್ದೆ ಹೋದರು. ಅತಿಯಾಗಿ ಆಯಾಸಗೊಂಡುದರಿಂದ ಅವರಿಗೆ ಗಾಢವಾದ ನಿದ್ದೆ ಬಂತು.

ಆಯಾಸಗೊಂಡು ಮಲಗಿ ನಿದ್ದೆ ಹೋಗಿದ್ದ ಬಾರ್ನಿ ಮಾರ್ಟಿನರಿಗೆ ಎಚ್ಚರವಾದಾಗ ಮೂಡಲಲ್ಲಿ ಸೂರ್ಯ ಮೂಡಿ ಎರಡು ಮಾರು ಆಕಾಶಕ್ಕೇರಿದ್ದ. ಕಾಡಿನ ಆ ದೃಶ್ಯ ಮನ ಮೋಹಕವಾಗಿತ್ತು! ಆಶ್ಚರ್ಯಕರವಾಗಿತ್ತು! ಹಲವು ಬಗೆಯ ಬಣ್ಣದ, ಆಕಾರದ ಗಿಡಮರಗಳು! ಹೂ ಬಳ್ಳಿಗಳು! ಹಣ್ಣು ಹಂಪಲುಗಳು! ಬಂಗಾರದ ಬಣ್ಣದ ಕಿತ್ತಳೆ ಹಣ್ಣನ್ನು ನೋಡಿದರೆ ಯಾರಿಗಾದರೂ ಬಾಯಲ್ಲಿ ನೀರು ಸುರಿಯಬೇಕು. ದ್ರಾಕ್ಷೆಗಳನ್ನು ಕಂಡಾಗ ಹಸಿವಿಲ್ಲದವರಿಗೂ ಹಸಿವಾಗಬೇಕು. ಆ ಬಗೆ ಬಗೆಯ ಬಾಳೆಗಳೋ! ಸಾವಿರಾರು ಬಗೆಯ ಪಕ್ಷಿಗಳು! ಅವುಗಳ ಇಂಪಾದ ವಿಧವಿಧದ ಸ್ವರವೇನು? ಬಣ್ಣಬಣ್ಣದ ಗರಿಗಳೇನು? ಇನ್ನು ಪತಂಗಗಳು! ಅವುಗಳ ಬಣ್ಣವೇನು? ಸೊಗ

ಸೇನು? ಮರಗಳ ಮೇಲೆ ಅತ್ತಿಂದಿತ್ತ ನೆಗೆಯುತ್ತಿದ್ದ ಮೋಟು ಬಾಲದ, ಉದ್ದ ಬಾಲದ, ಕಪ್ಪು, ಕೆಂಪು ಮೋರೆಗಳಿದ್ದ ಮಂಗಗಳು ಎಷ್ಟು ಜಾತಿಯವುಗಳಿದ್ದವೊ ಏನೋ! ನೋಟಕ್ಕೆ ಅತಿ ಸೊಗಸಾದ ಮಂಗಗಳು ಅಲ್ಲಿದ್ದುವು; ಅತಿ ಕ್ರೂರವಾದ ಕೋತಿಗಳೂ ಅಲ್ಲಿದ್ದುವು.

ಮಳೆಗೆ ಒದ್ದೆಯಾದುದರಿಂದಲೂ ರಾತ್ರಿಯೆಲ್ಲಾ ಸೊಳ್ಳೆಗಳು ಕಡಿದಿದ್ದರಿಂದಲೂ ಆಯಾಸದಿಂದಲೂ ಅವರು ಸೋತು ಸುಣ್ಣವಾಗಿದ್ದರು. ಎಚ್ಚರವಾದರೂ ಮಲಗಿದಲ್ಲಿಂದ ಏಳಲು ಮನಸ್ಸಿಲ್ಲ. ಹಾಗೆಯೇ ಮಲಗಿದರೆ ಮಾಡುವುದೇನು? ಹೊಟ್ಟೆಯೂ ಹಸಿದಿತ್ತು; ಅವರು ಮಲಗಿದಲ್ಲಿಂದ ಎದ್ದು ಅಲ್ಲೇ ಹತ್ತಿರದಲ್ಲಿ ಹರಿಯುತ್ತಿದ್ದ ಹಳ್ಳದಲ್ಲಿ ಮೋರೆ ತೊಳೆದು, ಬಳಿಯಲ್ಲಿದ್ದ ಕಿತ್ತಳೆ ಗಿಡಗಳಿಂದ, ದ್ರಾಕ್ಷೆ ಬಳ್ಳಿಗಳಿಂದ ಬೇಕಾದಷ್ಟು ಹಣ್ಣು ಕಿತ್ತು ತಿಂದು, ಹಸಿವಾರಿಸಿಕೊಂಡರು. "ನಾವು ಇನ್ನು ಏನು ಮಾಡುವುದು? ಎಲ್ಲಿಗೆ ಹೋಗುವುದು? ಇಲ್ಲಿ ಹೀಗೆ ಕುಳಿತರೆ ಕೆಲಸ ಸಾಗದು" ಎಂದು ಯೋಚಿಸಿದರು. "ನಾವು ಸಮುದ್ರ ತೀರಕ್ಕೆ ಹೋಗುವ. ಅಲ್ಲಿ ಯಾವುದಾದರೂ ದೋಣಿಯೋ ಹಡಗೋ ದೊರಕಬಹುದಲ್ಲ. ಹೇಗೆ?" ಎಂದು ಮಾರ್ಟಿನ್ ಮಾತು ತೆಗೆದನು. "ಸಮುದ್ರ ತೀರಕ್ಕೆ ಹೋಗುವುದು ಬೇಡ. ನನಗೇನೂ ಆ ಕಡೆಗೆ ಹೋಗಲು ಮನಸ್ಸಿಲ್ಲ. ನಾವು ಇಲ್ಲೇ ಮುಂದು ವರಿಯುವ. ಯಾವುದಾದರೊಂದು ಹಳ್ಳಿ ದೊರಕಬಹುದು. ಹೀಗೆಯೇ ಕಾಡಿನ ದಾರಿಯಲ್ಲಿ ಮುಂದುವರಿಯುವ" ಎಂದು ಬಾರ್ನಿ ಅಭಿಪ್ರಾಯವಿತ್ತನು. ಸಾಹಸಪ್ರಿಯನಾದ ಮಾರ್ಟಿನನಿಗೂ ಬಾರ್ನಿಯ ಮಾತೇ ಸರಿಯೆನ್ನಿಸಿತು.

ಮತ್ತೆ ಅವರು ಅಲ್ಲಿ ಕುಳಿತುಕೊಳ್ಳದೆ, ಎದ್ದು ಮುಂದುವರಿದರು. ಮಾರ್ಟಿನ್ ತಾನು ಶಾಲೆಯಲ್ಲಿ ಕಲಿಯುತ್ತಿದ್ದಾಗ ದಕ್ಷಿಣ ಅಮೇರಿಕದ ಮೃಗಪಕ್ಷಿಗಳ ವಿಷಯವಾಗಿ, ಸಸ್ಯ

ಸಂಪತ್ತಿನ ವಿಚಾರವಾಗಿ ತುಂಬ ಓದಿ ಸಂತೋಷ ಪಟ್ಟಿದ್ದನು; ಅನುಭವಪಡೆದಿದ್ದನು. ಈಗ ಅವುಗಳನ್ನು ಪ್ರತ್ಯಕ್ಷವಾಗಿ ಕಂಡು ಆನಂದಿಸಿದನು; ಬಾರ್ನಿಗೆ ವರ್ಣಿಸಿ ಹೇಳಿ ಹರ್ಷಗೊಂಡನು. ಹೀಗೆ ಅವರು ಕಾಡಿನ ಅಂದಚಂದಗಳನ್ನು ನೋಡುತ್ತ, ಆಯಾಸ ವಾದಾಗ ಅಲ್ಲಲ್ಲಿ ಕುಳಿತು ಹಣ್ಣು ಹಂಪಲುಗಳನ್ನು ತಿನ್ನುತ್ತಾ ಮುಂದುವರಿದರು.

ಎಷ್ಟು ಬಗೆಯ ಹಂದಿಗಳು! ಎಷ್ಟು ರೀತಿಯ ಕಪಿಗಳು! ಎಷ್ಟು ನಮೂನೆಯ ಹಕ್ಕಿ ಹರಣೆಗಳು! ಆ ಕಾಡಿನಲ್ಲಿಲ್ಲದ ಮೃಗ ಪಕ್ಷಿಗಳಿಲ್ಲ, ಗಿಡಮರಗಳಿಲ್ಲ. ಅವುಗಳ ಅಂದಚಂದವನ್ನು, ಕ್ರೂರಕಾಠಿಣ್ಯವನ್ನು ನೋಡುತ್ತ, ಅವರು ದಾರಿ ಮಾಡಿಕೊಂಡು ಮುಂದೆ ನಡೆದರು. ಸಾಯಂಕಾಲವಾಗುತ್ತ ಬಂತು; ಸೂರ್ಯನು ಪಶ್ಚಿಮಕ್ಕಿಳಿದನು. ನಸುಕತ್ತಲೆ ಹರಡಿತು. ಆಗಲೇ ಭಯಂಕರ ವಾದ ಕಾಡುಹಂದಿಗಳ ಗುಂಪೊಂದು ಅವರ ಹಾದಿಗೆ ಅಡ್ಡ ಬಂತು; ಆಗ ಅವರು ಒಂದು ಎತ್ತರದ ಮರವನ್ನೇರಿ, ಹಂದಿಗಳು ಕಣ್ಮರೆಯಾಗುವ ವರೆಗೂ ಅಲ್ಲೇ ಕುಳಿತು, ಮತ್ತೆ ಕೆಳಗಿಳಿದರು. "ಇನ್ನು ನಾವು ಮುಂದುವರಿಯಲು ಸಾಧ್ಯವಿಲ್ಲ. ಇಲ್ಲೇ ಎಲ್ಲಿ ಯಾದರೂ ಕುಳಿತು ರಾತ್ರಿಯನ್ನು ಕಳೆಯುವ" ಎಂದು ಯೋಚಿ ಸುತ್ತಿರುವಾಗಲೇ ಒಂದು ಭಯಂಕರ ಗರ್ಜನೆ ಕೇಳಿಸಿತು. ಬಾರ್ನಿ ತನ್ನ ಕತ್ತಿಯನ್ನು ಕೈಯಲ್ಲಿ ಹಿಡಿದುಕೊಂಡು, "ಇಲ್ಲಿ ಸಿಂಹಗಳಿವೆಯೇನು?" ಎಂದು ಮಾರ್ಟಿನನನ್ನು ಕೇಳಿದನು. "ಈ ಕಾಡುಗಳಲ್ಲಿ ಸಿಂಹಗಳಿಲ್ಲ. ಆದರೆ ಜಾಗರ್ ಎಂಬ ಜಾತಿಯ ಹುಲಿಗಳಿವೆ ಎಂದು ಭೂಗೋಳ ಪಾಠದಲ್ಲಿ ಓದಿದ್ದೇನೆ." ಎಂದು ಮಾರ್ಟಿನ್ ಮಾತು ಮುಗಿಸುವುದರೊಳಗೆ, ಇನ್ನೊಂದು ಭಯಂಕರ ಗರ್ಜನೆ ಕೇಳಿಸಿತು! ದೊಡ್ಡ ಹುಲಿಯೊಂದು ಕೆಂಡ ದಂತಹ ಕಣ್ಣುಗಳನ್ನು ಅರಳಿಸಿ ಅವರ ಎದುರಿನಲ್ಲಿ ನಾಲ್ಕು ಮಾರು ದೂರದಲ್ಲಿ ಕಾಣಿಸಿಕೊಂಡಿತು! ಕಾಡು ಮೃಗಗಳಿಗೆ ಹೆದರದೆ

ನೆಟ್ಟ ದೃಷ್ಟಿಯಿಂದ ಅವುಗಳ ಕಡೆಗೆ ನೋಡಿದರೆ, ಅವು ಹೆದರಿ ಓಡಿ ಹೋಗುವವೆಂದು ಮಾರ್ಟಿನನೂ ಬಾರ್ನಿಯೂ ತಿಳಿದಿದ್ದರು. ಈಗ ಈ ಹುಲಿಯನ್ನು ಕಂಡು ಅವರು ಹೆದರಿದ್ದರೂ ಹೆದರಿ ಕೊಂಡವರಂತೆ ತೋರಿಸಿಕೊಳ್ಳದೆ, ನೆಟ್ಟದೃಷ್ಟಿಯಿಂದ ಆ ಹುಲಿಯನ್ನೇ ನೋಡುತ್ತ ನಿಂತರು. ಈ ಮನುಜ ಪ್ರಾಣಿಗಳು ತನಗೆ ಹೆದರುವುದಿಲ್ಲವೆಂದು ತಿಳಿದ ಆ ಕ್ರೂರ ಹುಲಿ ಒಂದರೆಗಳಿಗೆ ಅವರನ್ನೇ ನೋಡುತ್ತ ಕುಳಿತು, ಕಡೆಗೊಮ್ಮೆ ಭಯಂಕಾರವಾಗಿ ಗರ್ಜಿಸಿ ಅಲ್ಲಿಂದ ಹೊರಟು ಹೋಯಿತು. ಅಷ್ಟು ಹೊತ್ತಿಗೆ ಆ ಇಬ್ಬರು ಪ್ರಯಾಣಿಕರ ಮೈಯೆಲ್ಲಾ ಹೆದರಿಕೆಯಿಂದ ಬೆವತು ಹೋಗಿತ್ತು. ಕೈಕಾಲು ನಡುಗುತ್ತಿತ್ತು. ಹುಲಿಯ ಬಾಯಿಯಿಂದ 'ಬಚಾವ್' ಮಾಡಿದುದಕ್ಕಾಗಿ ಅವರು ಅಲ್ಲೇ, ನಿಂತಲ್ಲೇ ದೇವರನ್ನು ಪ್ರಾರ್ಥಿಸಿದರು; ಒಮ್ಮೆಗೆ ಬದುಕಿಕೊಂಡೆವೆಂದು ಸಮಾಧಾನ ತಂದುಕೊಂಡರು.

"ಇನ್ನು ನಾವು ಮುಂದುವರಿಯಲಾರೆವು. ದಾರಿಯೂ ಕಾಣುವುದಿಲ್ಲ. ಕಾಡು ಮೃಗಗಳ ಭೀತಿಯೂ ಇದೆ. ಇಲ್ಲೇ ಬೆಂಕಿ ಉರಿಸಿ ಈ ಮರದ ಬುಡದಲ್ಲೇ ಒರಗಿಕೊಳ್ಳುವ." ಎಂದು ಅವರು ಗಂಟುಗಳನ್ನು ಕೆಳಗಿಳಿಸಿ, ಒಣ ಕಸಕಡ್ಡಿಗಳನ್ನು ಒಟ್ಟು ಕೂಡಿಸಿ ಬೆಂಕಿ ಉರಿಸಿದರು. ಹಗಲು ದಾರಿ ನಡೆಯುತ್ತ ಕೈಗೆ ಸಿಕ್ಕಿದ ಹಣ್ಣು ಹಂಪಲು ತಿಂದುದರಿಂದ ಹಸಿವೆಯಿರಲಿಲ್ಲ. ಎಷ್ಟೋ ರಾತ್ರಿಯ ವರೆಗೆ ಏನೇನೋ ಸುದ್ದಿ ಹೇಳುತ್ತ, ಕತೆ ಕೇಳುತ್ತ ಕುಳಿತರು. ಅವರು ಆ ರಾತ್ರಿ ಆ ಕಾಡಿನಲ್ಲಿ ಕೇಳಿದಷ್ಟು ಬಗೆಯ ಪ್ರಾಣಿಗಳ ಕೂಗುಗಳನ್ನು ಎಂದಿಗೂ ಕೇಳಿರಲಿಲ್ಲ. ಮಧ್ಯ ರಾತ್ರಿ ಕಳೆದಾಗ ಅವರ ಕಣ್ಣು ಕೂರಿ ನಿದ್ದೆ ಹಿಡಿಯಿತು.

## ಎಂಟು

ಮರುದಿನ ಬೆಳಗಾದೊಡನೆಯೇ ಮಾರ್ಟಿನನೂ ಬಾರ್ನಿಯೂ ತಮ್ಮ ಪ್ರಯಾಣವನ್ನು ಮುಂದುವರಿಸಿದರು. ಗುಡ್ಡ ಬೆಟ್ಟಗಳನ್ನು ಹತ್ತಿ ಇಳಿದು, ಕಾಡು ಮೇಡುಗಳನ್ನು ಹಾದು, ಹೊಳೆ ಹಳ್ಳಗಳನ್ನು ದಾಟಿ, ಸಾಯಂಕಾಲದ ಹೊತ್ತಿಗೆ ಒಂದು ಎತ್ತರವಾದ ಬೆಟ್ಟದ ಮೇಲಕ್ಕೆ ಬಂದರು. ಆಗ ಹೊತ್ತು ಮುಳುಗಿ ಸಂಜೆಯಾಗಿತ್ತು. ಅವರು ಆ ಬೆಟ್ಟದ ಮೇಲೆ ನಿಂತು ದೂರಕ್ಕೆ ನೋಡಿದಾಗ, ಸುಮಾರು ಅರ್ಧ ಹರದಾರಿ ದೂರದಲ್ಲಿ ಒಂದು ಬೆಳಕು ಕಾಣಿಸಿತು. ಆಗ ಅವರಿಗಾದ ಸಂತೋಷವನ್ನು, ಆನಂದವನ್ನು ಏನು ಹೇಳುವುದು! “ಅದು ಕಾಡು ಕಿಚ್ಚಲ್ಲ! ಯಾರೋ ಉರಿಸಿದ ದೀಪದ ಬೆಳಕೇ ಸರಿ” ಎಂದು ನಿಶ್ಚಯಿಸಿ, ಆ ಬೆಳಕು ಕಾಣಿಸುತ್ತಿದ್ದ ಕಡೆಗೆ ಅವರು ಬೇಗ ಬೇಗನೆ ಹಜ್ಜೆ ಹಾಕಿದರು; ಒಂದರ್ಧ ಗಂಟೆಯುಲ್ಲಿ ಆ ಬೆಳಕಿನ ಬಳಿ ಸೇರಿದರು.

ಅಲ್ಲೊಂದು ಗುಡಿಸಲು. ಗುಡಿಸಲ ಒಳಗೆ ಒಂದು ಅಗ್ಗಿಷ್ಟಿಕೆಯಲ್ಲಿ ಬೆಂಕಿ ಉರಿಯುತ್ತಿದ್ದುದೂ, ಬೆಂಕಿಯ ಬೆಳಕಿನಲ್ಲಿ ಹೆಚ್ಚು ಕಡಮೆ ಗುಡಿಸಲಿನೊಳಗಿನ ಎಲ್ಲಾ ವಸ್ತುಗಳೂ ಹತ್ತು ಮಾರು ದೂರದಲ್ಲಿ ನಿಂತ ಮಾರ್ಟಿನ್ ಬಾರ್ನಿಯರಿಗೆ ಸ್ಪಷ್ಟವಾಗಿ ಕಾಣಿಸುತ್ತಿದ್ದುವು. ಆ ಗುಡಿಸಲೊಳಗೆ ಪ್ರಾಯ ಹೋದ ಗಟ್ಟಿ ಮುಟ್ಟಾದ ಮನುಷ್ಯನೊಬ್ಬನು ಒಂದು ಹಳೆಯ ಕುರ್ಚಿಯ ಮೇಲೆ ಕುಳಿತು ಎದುರಿಗಿದ್ದ ಮೇಜಿನ ಮೇಲೆ ಒಂದು ಪುಸ್ತಕವಿಟ್ಟು ಓದುತ್ತಿದ್ದನು. ಆ ಮನುಷ್ಯನು ಒಂದು ಹರಕು ನಿಲುವಂಗಿಯನ್ನು ತೊಟ್ಟು ಸೊಂಟಕ್ಕೆ ಒಂದು ಚರ್ಮದ ಪಟ್ಟಿ ಸುತ್ತಿದ್ದನು. ಅವನ ಕೂದಲು ಕಪ್ಪಾಗಿದ್ದರೂ ಅಲ್ಲಲ್ಲಿ ಒಂದೊಂದು ಸರೆ ಕೂದಲು ಬೆಳೆದಿತ್ತು. ಅವನು ಏನೋ ಗಂಭೀರವಾದ ಯೋಚನೆಯಲ್ಲಿದ್ದವನಂತೆ ಕಾಣಿಸುತ್ತಿದ್ದನು. ಆ ಗುಡಿಸಲಿನ

ಗೋಡೆಯಲ್ಲಿ ಕೋವಿ ಕತ್ತಿ ಮೊದಲಾದ ಹಲವು ಬಗೆಯ ಆಯುಧ ಗಳು ತೂಗಾಡುತ್ತಿದ್ದುವು. ಹಲವಾರು ಬಗೆಯ ವನ್ಯ ಜಂತುಗಳ ತಲೆ, ಕೊಂಬು, ಚರ್ಮಗಳೂ ಅಲ್ಲಿ ನೇತಾಡುತ್ತಿದ್ದವು. ಇವು ಗಳಿಂದ ಆ ಮನುಷ್ಯನೊಬ್ಬ ಬೇಟೆಗಾರನಾಗಿರಬಹುದೆಂದು ಊಹಿಸಬಹುದಿತ್ತು.

ಮಾರ್ಟಿನ್ ಮತ್ತು ಬಾರ್ನಿ "ಇವನು ಕಾಡು ಮನುಷ್ಯ ನೇನೋ?" ಎಂದು ಯೋಚಿಸುತ್ತ ಮೆಲ್ಲಗೆ ಗುಡಿಸಲ ಬಳಿಗೆ ಹಜ್ಜೆ ಹಾಕಿದರು. ಹಾಗೆ ಮುಂದುವರಿದು ಗುಡಿಸಲಿನ ಹತ್ತಿರ ವಾದರೆನ್ನುವಾಗ ಬಾರ್ನಿ ಕಾಲುಜಾರಿ ಧೊಪ್ಪನೆ ಬಿದ್ದು ಬಿಟ್ಟನು. ಆ ಸದ್ದು ಕೇಳಿದೊಡನೆಯೇ ಗುಡಿಸಲಿನೊಳಗಿದ್ದ ಮನುಷ್ಯನು ಕುಳಿತಲ್ಲಿಂದ ಎದ್ದು, ಗೋಡೆಗೆ ತೂಗಹಾಕಿದ್ದ ಬಂದೂಕನ್ನು ತೆಗೆದುಕೊಂಡು ಗುಡಿಸಲ ಬಾಗಿಲಿಗೆ ಬಂದು, "ಯಾರದು?" ಎಂದು ಪೊರ್ತುಗೀಸ್ ಭಾಷೆಯಲ್ಲಿ ಕೇಳಿದನು. "ನಾವು, ನೀನೇಕೆ ಗದರಿಸುವೆ? ಕಾಲು ಜಾರಿ ಬಿದ್ದಿದ್ದೇನೆ. ಬಂದು ಎತ್ತ ಬಾರದೇ?" ಎಂದು ಬಾರ್ನಿ ಇಂಗ್ಲಿಷಿನಲ್ಲಿ ಹೇಳುತ್ತ ಬಿದ್ದಲ್ಲಿಂದ ಎದ್ದು ಮಾರ್ಟಿನನೊಡನೆ ಗುಡಿಸಲಿನ ಬಾಗಿಲಿಗೆ ನಡೆದನು.

"ಬನ್ನಿ, ಒಳಗೆ ಬನ್ನಿ, ಕಾಡು ಪ್ರಾಣಿಯೇನೋ ಎಂದು ಯೋಚಿಸಿದೆ. ನೀವು ಮನುಷ್ಯರು; ಇಂಗ್ಲಿಷ್ ಬಲ್ಲವರು; ಇಂಗ್ಲಿಷರು; ನನಗೂ ಇಂಗ್ಲಿಷ್ ಬರುತ್ತದೆ. ಎಷ್ಟೋ ಮಂದಿ ಆಂಗ್ಲರ ಪರಿಚಯ ನನಗಿತ್ತು. ಈಗ ಎಲ್ಲ ಹಳೆಯ ನೆನಪಾಗಿದೆ" ಎಂದು ಹೇಳುತ್ತ ಆ ಮನುಷ್ಯನು ಅವರನ್ನು ಬಳಿಗೆ ಕರೆದು, ಒಂದೊಂದು ಮುಕ್ಕಾಲಿಗೆ ಕೊಟ್ಟು ಕುಳಿತುಕೊಳ್ಳಲು ಇಂಗ್ಲಿಷಿ ನಲ್ಲಿ ಹೇಳಿದನು. ಅವರು ಕುಳಿತು ಕೊಂಡ ಮೇಲೆ, "ನೀವು ಬಹಳ ಆಯಾಸಗೊಂಡಂತೆ ಕಾಣುತ್ತದೆ. ಸ್ವಲ್ಪ ಫಲಾಹಾರ ಮಾಡಿ" ಎಂದು ಹೇಳಿ ಹಲವು ಬಗೆಯ ಒಣಗಿದ ಹಣ್ಣುಗಳನ್ನೂ ಹಸಿ ಹಣ್ಣುಗಳನ್ನೂ ಒಂದು ಜೇನಿನ ಹೂಜೆಯನ್ನೂ, ಒಂದು

ನೀರಿನ ಹೂಜಿಯುನ್ನೂ ಅವರ ಮುಂದೆ ಇರಿಸಿದನು; ಮತ್ತೆ ತನ್ನ ಕಡೆಗೆ ಕುತೂಹಲದಿಂದ ನೋಡುತ್ತಿದ್ದ ಮಾರ್ಟಿನ್ ಬಾರ್ನಿಯರ ಕುತೂಹಲ ನಿವೃತ್ತಿಗಾಗಿ ತಾನೊಬ್ಬ ಪಾದ್ರಿ, ತನ್ನಿಂದ ಅವರಿಗೆ ಬೇಕಾದ ಸಹಾಯ ದೊರಕಬಹುದು ಎಂದಿಷ್ಟೇ ಹೇಳಿ, ಫಲಾಹಾರ ಮಾಡಲು ಹೇಳಿದನು.

ಬಾರ್ನಿ ರುಚಿಯಾದ ಅನನಾಸಿನ ತುಂಡೊಂದನ್ನು ತೆಗೆದುಕೊಂಡು ಮೆಲ್ಲತೊಡಗಿದನು. ಮಾರ್ಟಿನ್ ಕಿತ್ತಳೆಯ ಸವಿ ನೋಡತೊಡಗಿದನು. ಅವರು ಹಣ್ಣು ತಿನ್ನುತ್ತಿರುವಾಗ ಆ ಪಾದ್ರಿ, ಅವರು ಎಲ್ಲಿಂದ ಬಂದವರು? ಯಾಕೆ ಬಂದವರು? ಎಂದು ವಿಚಾರಿಸಿದನು. "ನಾವು ಸಮುದ್ರದಿಂದ ಬಂದೆವು. ನೀವು ಕೊಟ್ಟ ಹಣ್ಣುಗಳು ಬಹಳ ರುಚಿಯಾಗಿವೆ. ಹಸಿವೆಯಿಂದ ಸಾಯುತ್ತಿರುವ ನಮಗೆ ಅಮೃತ ದೊರೆತಂತಾಗಿದೆ. ನಿಮ್ಮ ಹೆಸರು ಕೇಳಲಿಲ್ಲ?" ಎಂದು ಬಾರ್ನಿ ಹಣ್ಣು ತಿನ್ನುತ್ತ ಹೇಳಿದನು.

"ನಮ್ಮ ಹಡಗನ್ನು ಸಮುದ್ರ ಕಳ್ಳರು ಮುತ್ತಿದರು. ಆಗ ನಾವು ಸಮುದ್ರಕ್ಕೆ ಹಾರಾಡಿ ತೀರಕ್ಕೆ ಈಜಾಡಿದೆವು. ಮತ್ತೆ ಎಲ್ಲಾದರೂ ಆಶ್ರಯ ಸಿಗುವುದೋ ಎಂದು ಎರಡು ದಿನ ಕಡು ಕಷ್ಟವನ್ನು ಅನುಭವಿಸುತ್ತ, ಕಾಡಿನಲ್ಲಿ ಅಲೆದಾಡಿ, ಈ ಗುಡಿಸಲನ್ನು, ನಿಮ್ಮ ಆಶ್ರಯುವನ್ನು ಪಡೆದೆವು." ಎಂದು ಮಾರ್ಟಿನ್ ನಡೆದ ವಿಷಯುವನ್ನೆಲ್ಲ ವಿಷದವಾಗಿ ವಿವರಿಸಿದನು. ಎಡೆ ಎಡೆಯಲ್ಲಿ ಬಾರ್ನಿಯೂ ಒಂದೆರಡು ಮಾತು ಕೂಡಿಸಿದನು. ಪಾದ್ರಿ ಬಹಳ ಸಮಾಧಾನದಿಂದ ಇವರ ಮಾತುಗಳನ್ನು ಕೇಳಿದನು; ಕಡೆಗೆ ನಿಟ್ಟುಸಿರು ಬಿಟ್ಟು, "ನೀವು ಕಡು ಕಷ್ಟವನ್ನು ಅನುಭವಿಸಿದಿರಿ, ಎಷ್ಟೋ ಹೊಸ ವಿಷಯುಗಳನ್ನು ತಿಳಿದುಕೊಂಡಿರಿ. ಇನ್ನೂ ಎಷ್ಟೋ ತಿಳಿಯಲಿಕ್ಕಿರುವಿರಿ. ನಿಮಗೀಗ ಬಹಳ ಆಯಾಸವಾಗಿರಬಹುದು. ಮಲಗಿ ನಿದ್ದೆ ಹೋಗಿರಿ. ಎಲ್ಲ ನಾಳೆ ಬೆಳಗಾದ ಮೇಲೆ ಮಾತಾಡುವ" ಎಂದು ಹೇಳಿ, ಅಲ್ಲಿಂದ ಎದ್ದು ಹರಕು

ಚಿಂದಿಗಳ ರಾಶಿಯಿಂದ ಎರಡು ಮಲಗುವ ಬಲೆಗಳನ್ನು ಈಚೆಗೆ ತೆಗೆದು, ಒಂದು ಕಿಟಕಿಯಿಂದ ಇನ್ನೊಂದು ಕಿಟಕಿಗೆ ಕಟ್ಟಿದನು. ಅವುಗಳ ಮೇಲೆ ಎರಡು ಚಿಂದಿಗಳನ್ನು ಹಾಸಿದನು. "ಹೋಗಿ, ಮಲಗಿ, ಸುಖವಾಗಿ ನಿದ್ರೆ ಮಾಡಿ" ಎಂದು ಅವರ ಕಡೆಗೆ ನೋಡುತ್ತ, ಮುಗುಳ್ನಕ್ಕು ತನ್ನ ಕುರ್ಚಿಯ ಮೇಲೆ ಕುಳಿತನು ಆ ಮೇಲೆ ಮೇಜಿನ ಮೇಲಿನ ಪುಸ್ತಕ ಬಿಡಿಸಿ, ಮೌನವಾಗಿ ಓದ ತೊಡಗಿದನು. "ತುಂಬಾ ಉಪಕಾರವಾಯಿತು." ಎಂದು ಹೇಳಿ ಬಾರ್ನಿಯೂ ಮಾರ್ಟಿನನೂ ತಮಗಾಗಿ ಏರ್ಪಡಿಸಿದ್ದ ಬಲೆ ಹಾಸುಗೆಗಳಲ್ಲಿ ಮಲಗಿ ನಿದ್ದೆ ಹೋದರು.

ಮರುದಿನ ಬೆಳಗ್ಗೆ ಮಾರ್ಟಿನನಿಗೆ ಎಚ್ಚರವಾಯಿತು. ಆದರೆ ಏಳಲಿಕ್ಕೆ ತ್ರಾಣ ಇರಲಿಲ್ಲ. ಕಾಲಬಳಿ ವಸ್ತ್ರವೆಲ್ಲ ಒದ್ದೆ ಯಾಗಿತ್ತು. ಅದೇನೆಂದು ನೋಡಿದಾಗ ಕಾಲಿನಿಂದ ರಕ್ತ ಸುರಿದು ಒದ್ದೆಯಾದುದು ತಿಳಿದು ಬಂತು. ಏಳಲು ಯತ್ನಿಸಿದಾಗ ಶಕ್ತಿ ಹೀನನಾದ ಅವನಿಂದ ಏಳಲಾಗಲಿಲ್ಲ. ಬಾರ್ನಿ ಇನ್ನೂ ಗೊರಕೆ ಹೊಡೆಯುತ್ತಲೇ ಇದ್ದನು. ಮಾರ್ಟಿನ್ ಇದೇನು ಬಂತು ಎಂದು ಯೋಚಿಸುತ್ತಿದ್ದಾಗ, ಆ ಪಾದ್ರಿ ಒಂದು ಸತ್ತ ಜಿಂಕೆ ಮರಿಯನ್ನು ಹೆಗಲ ಮೇಲೆ ಹಾಕಿಕೊಂಡು ಒಳಗೆ ಬಂದು, ಅದನ್ನು ಒಂದು ಮೂಲೆಯಲ್ಲಿ ಇರಿಸಿ, ಬಂದೂಕನ್ನು ಗೋಡೆಗೆ ತಗಲಿಸಿ, ಮಾರ್ಟಿ ನನ ಬಳಿಗೆ ಬಂದು, "ಚೆನ್ನಾಗಿ ನಿದ್ದೆ ಬಂತಾ!" ಎಂದು ವಿಚಾರಿ ಸಿದನು. "ನಿದ್ದೆಯೇನೋ ಬಂತು; ಕಾಲಿನಿಂದ ತುಂಬ ರಕ್ತ ಸುರಿ ದಂತೆ ತೋರುತ್ತದೆ. ಏಳಲಿಕ್ಕೆ ತ್ರಾಣವೇ ಇಲ್ಲ. ಏನಾಯಿ ತೋ ಏನೋ" ಎಂದು ಮಲಗಿದಲ್ಲಿಂದಲೇ ಮಾರ್ಟಿನ್ ನುಡಿದನು. ಪಾದ್ರಿ ಮಾರ್ಟಿನನ ಕಾಲಬಳಿಯ ರಕ್ತವನ್ನೂ ಕಾಲಿನ ಗಾಯವನ್ನೂ ನೋಡಿ, ಪೋರ್ತುಗೀಸ್ ಭಾಷೆಯಲ್ಲಿ ಏನೇನೋ ಮಂತ್ರ ಹೇಳತೊಡಗಿದನು. ಆಗ ಬಾರ್ನಿಗೂ ಎಚ್ಚರ ವಾಯಿತು. ಅವನು ಈ ರಕ್ತ ಪ್ರವಾಹವನ್ನು ಕಂಡು, ಏನು?

ಏಕೆ? ಎಂದು ಗಾಬರಿಯಿಂದ ಕೇಳಿದನು. ಪಾದ್ರಿ "ಏನೂ ಇಲ್ಲ. ಗಾಬರಿ ಬೇಡ" ಎನ್ನುತ್ತ ಗುಡಿಸಲಿಂದ ಹೊರಗೆ ಹೋಗಿ ಒಂದು ಅರೆ ಕ್ಷಣದಲ್ಲಿ ಏನೋ ಒಂದು ಮೂಲಿಕೆ ತಂದು ಜಜ್ಜಿ, ಮಾರ್ಟಿನನ ಗಾಯಕ್ಕೆ ಹಚ್ಚಿದನು. "ಇನ್ನು ಒಂದೆರಡು ದಿನ ಏನೂ ಮಾಡಲಾಗುವುದಿಲ್ಲ. ಗಾಯ ಗುಣವಾಗಿ ತ್ರಾಣ ಬರಬೇಕಾದರೆ ಒಂದೆರಡು ದಿನ ಬೇಕು. ಈ ಕಾಡಿನಲ್ಲಿ ರಾಕ್ಷಸಾಕಾರದ ಬಾವಲಿಗಳಿವೆ. ಅಂತಹ ಬಾವಲಿ ಇವನ ಕಾಲಿನ ರಕ್ತ ಹೀರಿದೆ. ಬಹು ಭಯಂಕರ ಪ್ರಾಣಿಯದು. ಎರಡು ಮೂರು ಸಲ ಹೀಗೆ ರಕ್ತ ಹೀರಿದರೆ ಜೀವವೇ ಹಾರಿ ಹೋಗುವುದು. ನನ್ನ ಎರಡು ದನಗಳೂ ಒಂದು ಕುದುರೆಯೂ ಇಂತಹ ಬಾವಲಿಗಳ ಬಾಯಿಗೆ ಬಲಿಯಾಗಿವೆ." ಎಂದು ಬಾವಲಿಗಳ ವಿಷಯ ಹೇಳಿ, ತಾನು ಕೊಂದು ಒಣಗಿಸಿ ಇಟ್ಟಿದ್ದ ಒಂದು ಬಾವಲಿಯನ್ನು ತೋರಿಸಿದನು. "ಅಬ್ಬಾ! ಭಯಂಕರ ಬಾವಲಿ! ಮಾರ್ಟಿನನ ಆರೋಗ್ಯವನ್ನೇ ಕೆಡಿಸಿ ಬಿಟ್ಟಿತು!" ಎಂದು ಬಾರ್ನಿ ಉದ್ಗಾರವೆತ್ತಿದನು. "ಅಪಾಯವೇನೂ ಇಲ್ಲ. ನಾಳೆಯೇ ಇವನು ಹುಶಾರಾಗುವನು; ಗಾಬರಿಬೇಡ. ಈಗ ಬೆಳಗಿನ ಉಪಾಹಾರ ತೀರಿಸುವ" ಎಂದು ನುಡಿದು ಪಾದ್ರಿ ಮಾರ್ಟಿನನ್ನೂ ಬಾರ್ನಿಯನನ್ನೂ ಸಮಾಧಾನಪಡಿಸಿದನು.

ಉಪಾಹಾರಕ್ಕೆಂದು ಮೂವರೂ ಮೇಜಿನ ಸುತ್ತು ಕುಳಿತರು. ಪಾದ್ರಿ ತಾನು ಆಗ ತಾನೇ ತಂದಿದ್ದ ಜಿಂಕೆಯ ಮಾಂಸವನ್ನು ಸುಟ್ಟು ಉಪಾಹಾರಕ್ಕೆ ಸಿದ್ಧಗೊಳಿಸಿದನು. ಅವನು ಮೂರು ನಾಲ್ಕು ತರದ ಮಾಂಸಗಳನ್ನೂ, ನಾಲ್ಕಾರು ಬಗೆಯ ಹಣ್ಣುಗಳನ್ನೂ, ಕಾಫಿ, ರೊಟ್ಟಿ, ಬೆಣ್ಣೆ ಜೇನು ಮೊದಲಾದುವನ್ನು ಮೇಜಿನ ಮೇಲೆ ಇರಿಸಿದ್ದನು. ಬಾರ್ನಿಯೂ ಮಾರ್ಟಿನನೂ ಆಷ್ಟರವರೆಗೆ ರುಚಿ ನೋಡದಿದ್ದ ಮಾಂಸಗಳು ಅಲ್ಲಿದ್ದುವು. ಒಂದು ಬಗೆಯ ಮಾಂಸದ ರುಚಿ ನೋಡುತ್ತ "ಇದು ಯಾವ

ಪ್ರಾಣಿಯ ಮಾಂಸ?" ಎಂದು ವಿಚಾರಿಸಿ, "ಹಾಂ! ನಿಮ್ಮ ಹೆಸರನ್ನು ಕೇಳಲು ಮರೆತೆ ಬಿಟ್ಟೆವು. ದಯಮಾಡಿ ಹೇಳಿ" ಎಂದು ಕೇಳಿದನು.

"ಹೌದು! ನನ್ನ ಹೆಸರು ಹೇಳಲಿಲ್ಲ, ನನ್ನ ಪರಿಚಯುವನ್ನೂ ವಿವರಿಸಲಿಲ್ಲ. ನನ್ನ ಹೆಸರು ಕಾರ್ಲೊ. ಈ ಮಾಂಸ ಈ ಕಾಡಿನಲ್ಲಿ ದೊರಕುವ ಅರಮಾದಿಲ್ಲೊ ಎಂಬ ಪ್ರಾಣಿಯುದು. ಅಷ್ಟು ರುಚಿಕರವಾದ ಮಾಂಸವನ್ನು ನಾನು ಇಷ್ಟರ ವರೆಗೂ ತಿಂದಿಲ್ಲ. ಮಾಂಸವೇನೋ ರುಚಿಯಿದೆ, ಆದರೆ ಆ ಮಾಂಸ ದೊರಕಬೇಕಾದರೆ ಪಡಬೇಕಾದ ಕಷ್ಟ ಯಾರಿಗೆ ಬೇಕು? ಆ ಪ್ರಾಣಿ ನೆಲದ ಅಡಿಯಲ್ಲಿ ಬಿಲ ಕೊರೆದು, ಅಲ್ಲಿ ವಾಸಿಸುತ್ತದೆ. ಅದನ್ನು ಹಿಡಿಯುುವ ಕೆಲಸ ಬಹಳ ಕಷ್ಟ. ಅದರ ಬಿಲಕ್ಕೆ ನೂರಾರು ಬಾಯಿ. ಆ ಬಾಯಿಗಳನ್ನೆಲ್ಲ ಮುುಚ್ಚಿ, ಒಂದು ಬಾಯಿ ಬಿಟ್ಟು ಹೊಗೆ ಹಾಕಿ, ಅದನ್ನು ಹೊರಡಿಸಿ, ಹಿಡಿದು ಕೊಲ್ಲ ಬೇಕು. ಕೆಲಸ ಅಷ್ಟೇನೂ ಸುಲಭವಲ್ಲ" ಎಂದು ಕಾರ್ಲೊ ಪಾದ್ರಿ ಮುುಂದುವರಿಸಿದನು:— "ಇಲ್ಲಿ ನೋಡಿ, ಈ ಕೆನೆ ಉಂಟಲ್ಲ, ಇದು ನಿಜವಾದ ಎಮ್ಮೆ, ದನಗಳಿಂದ ದೊರಕುವುದಲ್ಲ. ಇದು ನೆಲದಲ್ಲಿ ಬೆಳೆಯುುವ ಒಂದು ವಸ್ತು. ನೋಡಿ, ಈ ರೊಟ್ಟಿ ಇದೆಯಲ್ಲ, ಇದರ ಹಿಟ್ಟನ್ನು ಮರಗೆಣಸಿನಿಂದ ತಯಾರಿಸಿದ್ದೇನೆ. ಈ ಪ್ರಾಂತದ ನೀಗ್ರೊಗಳೂ ರೆಡ್ ಇಂಡಿಯನರೂ ಇದನ್ನೇ ಆಹಾರಕ್ಕೆ ಉಪಯೋಗಿಸುತ್ತಾರೆ."

"ಒಹೋ! ಹಾಗಾದರೆ ಇಲ್ಲಿ ನೀಗ್ರೋಗಳೂ ರೆಡ್ ಇಂಡಿಯನರೂ ವಾಸಿಸುತ್ತಾರೋ?" ಎಂದು ಬಾರ್ನಿ ಆಶ್ಚರ್ಯದಿಂದ ಕೇಳಿದನು. "ಹೌದು, ಗುಲಾಮರಾಗಿ ಎಷ್ಟೋ ನೀಗ್ರೋಗಳಿರುವರು. ರೆಡ್ ಇಂಡಿಯನರೂ ಇರುವರು." ಎಂದು ಹೇಳಿ, "ಈ ಜೇನು ಮರದ ಪೊಟರೆಗಳಲ್ಲಿ ಬೇಕಾದಷ್ಟು ದೊರಕುತ್ತದೆ. ಬಾಳೆ, ಕಿತ್ತಳೆ, ದ್ರಾಕ್ಷೆ, ಗೆಣಸು ಇವೆಲ್ಲ ಈ ಕಾಡುಗಳಲ್ಲಿ ದೊರಕುತ್ತವೆ." ಎಂದು ಕಾರ್ಲೊ, ಉತ್ತರಿಸಿದನು.

ಉಪಾಹಾರವಾದ ಮೇಲೆ ಕಾರ್ಲೊ ಮಾರ್ಟಿನನೊಡನೆ, ಆತನು ದುರ್ಬಲನಾದುದರಿಂದ ಅತ್ತಿತ್ತ ತಿರುಗಾಡ ಬಾರದೆಂದೂ, ಸುಮ್ಮಗೆ ವಿಶ್ರಾಂತಿ ತೆಗೆದುಕೊಳ್ಳಬೇಕೆಂದೂ ಹೇಳಿದನು. ಕಾರ್ಲೊ ಹೇಳಿದಂತೆ ಮಾರ್ಟಿನ್ ತಾನು ಮಲಗುವ ಉಯ್ಯಾಲೆಯನ್ನು ಏರಿದನು. ಕಾರ್ಲೊನ ವೃತ್ತಾಂತ ತಿಳಿಯಬೇಕೆಂಬ ತನ್ನ ಕುತೂಹಲವನ್ನು ಬಾರ್ನಿ ಹೊರಗೆಡವಿದನು. “ನನ್ನ ವೃತ್ತಾಂತ ಕೇಳಬೇಕೋ? ಹೇಳುವ. ಅದಕ್ಕೇನು?” ಎನ್ನುತ್ತ ಕಾರ್ಲೊ ತನ್ನ ಕುರ್ಚಿಯನ್ನು ಗುಡಿಸಲ ಬಾಗಿಲ ಕಡೆಗೆ ಎಳೆದು, ಪೆಟ್ಟಿಗೆಯಿಂದ ಒಂದು ದೊಡ್ಡ ಚುಟ್ಟಾ ತಂದು “ಬಾರ್ನಿಗೆ ಚುಟ್ಟದ ಅಭ್ಯಾಸವಿದೆಯೋ?” ಎಂದು ಕೇಳಿದನು. ಅದಕ್ಕೆ ಬಾರ್ನಿ ತನಗೆ ಚುಟ್ಟದ ಚಟವಿಲ್ಲವೆಂದೂ, ಚಿಲುಮೆಯಲ್ಲಿ ಹೊಗೆಸೊಪ್ಪು ಸೇದುವ ಹವ್ಯಾಸವಿದೆಯೆಂದೂ ಹೇಳಿದನು. ಕಾರ್ಲೊ ಬಾರ್ನಿಗೆ ಚಿಲುಮೆಗೆ ಬೇಕಾದ ಹೊಗೆಸೊಪ್ಪು ಕೊಟ್ಟು, ತಾನು ಚುಟ್ಟ ಸೇದತೊಡಗಿದನು. ಬಾರ್ನಿಯ ಚಿಲುಮೆಯಲ್ಲಿ ಅಗ್ಗಿಷ್ಟಿಕೆಯಲ್ಲಿ ಬೆಂಕಿ ಉರಿಯುವಂತೆ ಹೊಗೆಸೊಪ್ಪು ಉರಿಯುತಿತ್ತು. ಕಾರ್ಲೊನ ಚುಟ್ಟಾದಿಂದ ಕಾರ್ಖಾನೆಯ ಚಿಮಿಣಿಯಿಂದ ಹೊಗೆ ಏಳುವಂತೆ ಹೊಗೆ ಏಳುತ್ತಿತ್ತು. ಚುಟ್ಟ ಸೇದುತ್ತ ಕಾರ್ಲೊ ತನ್ನ ಆತ್ಮಕಥೆಯನ್ನು ಹೇಳ ತೊಡಗಿದನು. ಬಾರ್ನಿಯೂ ಮಾರ್ಟಿನನೂ ಅದನ್ನು ಕುತೂಹಲದಿಂದ ಕೇಳತೊಡಗಿದರು.

## ಒಂಭತ್ತು

“ಸಾವಿರದ ಐನೂರನೆಯ ಇಸವಿಯಲ್ಲಿ ಪೋರ್ತುಗೀಸರು ಈ ಬ್ರೆಜಿಲ್ ದೇಶವನ್ನು ಸ್ವಾಧೀನಪಡಿಸಿಕೊಂಡರು. ಅನಂತರ ಹತ್ತು ವರ್ಷಗಳು ಕಳೆದ ಮೇಲೆ ನನ್ನ ಹಿರಿಯರು ಒಂದು ರಾತ್ರಿ ಈ ಬ್ರೆಜಿಲಿನ ಪೂರ್ವ ತೀರದಲ್ಲಿ ಪೋರ್ತುಗಲಿನಿಂದ ಬಂದಿಳಿದರು. ಆ ರಾತ್ರಿ ಗುಡುಗು ಮಿಂಚು ಬಿರುಗಾಳಿಗಳಿಂದ ಭಯಂಕರವಾಗಿ

ತ್ತಂತೆ. ಅವರು ಇಳಿದಾಗ ಅಲ್ಲಿ ಕಾಡು ಜನರು ಬೆಂಕಿ ಉರಿಸಿ ಹಾಡುತ್ತ ಕುಣಿಯುತ್ತ ಹಬ್ಬ ಮಾಡುತ್ತಿದ್ದರಂತೆ. ನನ್ನ ಹಿರಿಯರು ಬಂದಿಳಿದ ಆ ಕಾಡು ಪ್ರದೇಶದಲ್ಲಿ ಈಗ ಸಂಪತ್ತಿನಿಂದ ಸಮೃದ್ಧ ವಾದ ಬಾಹಿಯಾ ಎಂಬ ನಗರವಿದೆ.

"ನನ್ನ ಹಿರಿಯರು ಬಂದಿಳಿದ ರಾತ್ರಿ ಭಯಂಕರವಾದ ಬಿರುಗಾಳಿ ಇದ್ದುದರಿಂದ ಸಮುದ್ರದಲ್ಲಿ ತುಫಾನು ಎದ್ದು ಹಡಗು ಅದರಲ್ಲಿ ಅಡಿಮೇಲಾಗುತ್ತಿತ್ತಂತೆ. ಬಿರುಗಾಳಿಯ ರಭಸಕ್ಕೆ ಹಡಗಿನ ಹಾಯಿ ಹರಿದು, ಕೂವೆಮರ ತುಂಡಾಗಿತ್ತಂತೆ. ಅಂತಹ ಕಷ್ಟ ಸ್ಥಿತಿಯಲ್ಲಿ ಬಿರುಗಾಳಿಯು ಹೊಡೆತದಿಂದ ಆ ಹಡಗು ತಾನಾ ಗಿಯೇ ದಡ ಸೇರಿತಂತೆ. ಹಡಗು ದಡಕ್ಕೆ ಬಡಿದಾಗ ಅಲ್ಲೇ ಬಳಿ ಯಲ್ಲಿ ಬೆಂಕಿ ಉರಿಸಿ ಕುಣಿದಾಡುತ್ತಿದ್ದ ಆ ಕಾಡು ಜನರು ತಮ್ಮ ಆಟವನ್ನು ನಿಲ್ಲಿಸಿ, ಹಡಗಿನ ಬಳಿ ಬಂದು ಅದರಲ್ಲಿದ್ದ ಬಿಳಿಯ ರಾದ ನಮ್ಮವರನ್ನು ಆಶ್ಚರ್ಯದಿಂದ ನೋಡುತ್ತ ನಿಂತರಂತೆ. ಆ ಜನರು ಅಷ್ಟರ ವರೆಗೆ ಬಿಳಿ ಜನರ ವಿಷಯವಾಗಿ, ಅವರ ತೇಲುವ ಮನೆಗಳಾದ ಹಡಗುಗಳ ವಿಷಯವಾಗಿ ಕಿವಿಯಿಂದ ಕೇಳಿದ್ದರೇ ವಿನಾ ಕಣ್ಣಿನಿಂದ ನೋಡಿರಲಿಲ್ಲವಂತೆ.

"ನಮ್ಮ ಹಿರಿಯರು — ಪೋರ್ತುಗೀಸರು — ತಾವು ಬಿರು ಗಾಳಿಗೆ ಸಿಕ್ಕಿ ಸಮುದ್ರದ ಪಾಲಾಗುವ ದುರಂತದಿಂದ ಪಾರಾದೆ ವೆಂದು ಎಣಿಸಿ ದಡಕ್ಕೆ ಬಡಿದಿದ್ದ ಹಡಗಿನಿಂದ ಇಳಿದರು. ಇಳಿದರೇನು? ದುರಂತ ಅವರನ್ನು ಬಿಟ್ಟಿರಲಿಲ್ಲ. ಆ ಕಾಡು ಜನರು ಈ ಬಿಳಿ ಜನರನ್ನು ಮುತ್ತಿಗೆ ಹಾಕಿ ಕೊಂದೇ ಹಾಕಿದರು! ಹಡಗಿನ ಕಪ್ತಾನನೊಬ್ಬನು ಮಾತ್ರ ಉಳಿದನು!

"ಒಡೆದ ಹಡಗಿನಲ್ಲಿದ್ದ ಜನರನ್ನು ಮೊದಲು ಇಳಿಯಲು ಹೇಳಿ ಆ ಕಪ್ತಾನನು ಕಡೆಗೆ ಇಳಿದಿದ್ದನು. ಅವನು ಬಹಳ ಧೈರ್ಯ ಶಾಲಿ, ಶಕ್ತಿಶಾಲಿ, ಯುಕ್ತಿಶಾಲಿ. ಆದುದರಿಂದ ಹಡಗಿನಿಂದ ಇಳಿಯುವಾಗಲೇ ಸಾಧ್ಯವಾದಷ್ಟು ಮದ್ದುಗುಂಡುಗಳನ್ನು ತೆಗೆದು

ಕೊಂಡು ಕೈಯಲ್ಲಿ ಪಿಸ್ತೂಲು ಹಿಡಿದುಕೊಂಡು ಕೆಳಗಿಳಿದನು. ತನ್ನನ್ನು ಮುತ್ತಿದ ಕಾಡು ಜನರ ಮೇಲೆ ಗುಂಡು ಹಾರಿಸುತ್ತ ಅವರಿಂದ ತಪ್ಪಿಸಿಕೊಂಡು ಕಾಡಿನೆಡೆಗೆ ಓಡಿದನು. ಕಪ್ತಾನ್ ಹಾರಿಸಿದ ಗುಂಡು ಯಾರಿಗೂ ತಗಲಲಿಲ್ಲವಾದರೂ ಆ ಗುಂಡುಗಳ ಸದ್ದು ಕೇಳಿ ಹಿಂದೆಂದೂ ಪಿಸ್ತೂಲು, ಕೋವಿಗಳನ್ನು ಕಂಡಿರದ ಆ ಜನರು ಒಮ್ಮೆಗೆ ನಡುಗಿದರು. ಆದರೂ ಆ ಕ್ರೂರಿಗಳು ಅವನನ್ನು ಬಿಡಲಿಲ್ಲ. ಕಾಡಿನ ಕಡೆಗೆ ಓಡಿದ ಅವನನ್ನು ಅವರೆಲ್ಲರೂ ಮುತ್ತಿದರು. ಆಗ ಅವನು ಮತ್ತೊಮ್ಮೆ ಆಕಾಶದ ಕಡೆಗೆ ಗುಂಡುಗಳನ್ನು ಎಸೆದನು. ಅದನ್ನು ಕಂಡು ಅವರು ಮತ್ತೊಮ್ಮೆ ನಡುಗಿದರು. ಕಾಡು ಜನರು ಗುಂಡಿಗೆ ಹೆದರುವರೆಂದು ತಿಳಿದೊಡನೆ ಕಪ್ತಾನ್ ಪಿಸ್ತೂಲನ್ನು ಮುಂದೆ ಚಾಚಿದನು. ಆಗ ಅವರು ಹೆದರಿ ಹಿಂದಕ್ಕೆ ಸರಿದರು. ಕಪ್ತಾನ್ ನಗುತ್ತ ಈಚೆ ಬನ್ನಿರೆಂದು ಸಂಜ್ಞೆ ಮಾಡಿದಾಗ ಈಚೆ ಬಂದರು. ಎಲ್ಲರಿಗಿಂತ ಮುಂದೆ ಧೃಡಕಾಯನಾದ, ಆಭರಣಗಳನ್ನು ಧರಿಸಿಕೊಂಡಾತನೊಬ್ಬನು ಮುಂದೆ ಬಂದನು. ಅವನೊಡನೆ ಎಳೆ ಹರೆಯದ ತರುಣಿಯೊಬ್ಬಳೂ ಇದ್ದಳು. ಆಭರಣ ಧರಿಸಿದಾತನು ಆ ಕಾಡು ಜನರ ಮುಂದಾಳು. ಆ ತರುಣಿ ಮುಂದಾಳಿನ ಮಗಳು. ಕಪ್ತಾನ್ ಎಡಗೈಯಲ್ಲಿದ್ದ ತನ್ನ ಪಿಸ್ತೂಲನ್ನು ನೆಲದ ಕಡೆಗೆ ಹಿಡಿದು, ನಗುತ್ತ ಬಲಗೈಯನ್ನು ಮುಂದೆ ಚಾಚಿದನು; ಆ ಕಾಡು ಜನರ ಮುಂದಾಳಿನ ಕೈಹಿಡಿದು ಕುಲುಕುತ್ತ ನೆಗಾಡಿದನು. ಆಗ ಮುಂದಾಳುವೂ ಅವನ ಮಕ್ಕಳೂ ನಕ್ಕರು. ಸುತ್ತಲೂ ಕೂಡಿದ್ದ ಕಾಡು ಜನರೂ ನಗುತ್ತಾ ಚಪ್ಪಾಳೆ ಹೊಡೆದರು. ಮತ್ತೆ ಕಪ್ತಾನನನ್ನು ತಾವು ಬೆಂಕಿ ಉರಿಸುತ್ತಿದ್ದೆಡೆಗೆ ಕರಕೊಂಡು ಬಂದು ಕುಳ್ಳಿರಿಸಿದರು. ಅವನಿಗೆ ತಿನ್ನಲು ಆಹಾರವನ್ನು ತಂದು ಕೊಟ್ಟರು. ಕಾಡು ಜನರ ಮತ್ತು ಅವರ ಮುಖಂಡನ ವರ್ತನೆಯಿಂದ ಅವರು ತನಗೆ ಹೆದರುತ್ತಿದ್ದಂತೆ ಕಪ್ತಾನನಿಗೆ ತೋರಿತು.

"ಮರುದಿನ ಬೆಳಗಾದೊಡನೆಯೇ ಕಪ್ತಾನನು ಆ ಮುಖಂಡ ನನ್ನು ಕರೆದು ತನ್ನ ಪಿಸ್ತೂಲಿನಿಂದ ಒಂದು ಹಕ್ಕಿಯನ್ನು ಕೊಂದು ತೋರಿಸಿದನು. ಇದರಿಂದ ಆ ಜನರಿಗೆ ಮತ್ತಷ್ಟು ಹೆದರಿಕೆಯಾಯಿತು. ಈ ಗುಂಡು ಜೀವ ತೆಗೆಯುತ್ತದೆಂದು ಆ ಜನರಿಗೆ ಖಂಡಿತವಾಯಿತು. ಅವರೆಲ್ಲರೂ ಅವನನ್ನು ದೇವತೆಯಂತೆ ಕಾಣ ತೊಡಗಿದರು. ಕಾಡು ಜನರ ಸ್ನೇಹ ಬೆಳೆಸಿದ ಕಪ್ತಾನ್ ಒಡೆದ ಹಡಗಿನಲ್ಲಿದ್ದ ಸಾಮಾನನ್ನೆಲ್ಲ ತರಿಸಿ ಆ ಕಾಡು ಜನರೊಡನೆಯೇ ಜೀವಿಸತೊಡಗಿದನು.

"ಕಪ್ತಾನನ ಹೆಸರು ಹೇಳಲೇ ಇಲ್ಲವಲ್ಲ? ದಿಯೋಗ್ ಅಲ್ವಾರಿಸ್ ಕಾರ್ಲೊ, ಅವನ ಹೆಸರು. ಕಾಡು ಜನರ ಎಡೆಯಲ್ಲಿ ಸ್ನೇಹದಿಂದ ಜೀವಿಸತೊಡಗಿದ ಅಲ್ವಾರಿಸ್ ಕಾರ್ಲೊ ಮುಂದೆ ಕೆಲವೇ ದಿನಗಳಲ್ಲಿ ಕಾಡು ಜನರ ಮುಖಂಡನ ಮಗಳನ್ನೇ ಮದುವೆಯಾದನು. ಮತ್ತೆ ಈ ಬಾಹಿಯಾ ನಗರದ ಸ್ಥಾಪಕ ನಾದನು. ಆ ಕಾಡು ಜನರು ಅವನನ್ನು 'ಕಾರಾಮುರು' ಎಂದರೆ ಬೆಂಕಿಯ ಮನುಷ್ಯ ಎಂದು ಕರೆಯತೊಡಗಿದರು.

"ಮೇಲೆ ಹೇಳಿದ ಘಟನೆ ನಡೆದ ಮೇಲೆ ಅನೇಕ ಮಂದಿ ಪೋರ್ತುಗೀಸರು ಈ ಬ್ರೆಜಿಲ್ ದೇಶಕ್ಕೆ ಬಂದು ನೆಲೆನಿಂತರು. ಊರು ಮಾಡಿದರು; ಪಟ್ಟಣ ಕಟ್ಟಿದರು. ಕೃಷಿ, ವ್ಯಾಪಾರ ಮಾಡಿದರು; ಐಶ್ವರ್ಯಗಳಿಸಿದರು.

"ಕಾಡುಜನರ ಮುಂದಾಳುವಾದ ಕಾರಾಮುರುವಿಗೆ ಮಕ್ಕಳು ಮರಿಗಳಾದರು. ಅವರು ಕೃಷಿಮಾಡಿ ಐಶ್ವರ್ಯವಂತ ರಾದರು. ಬ್ರೆಜಿಲಿನಲ್ಲಿ ಸಿಕ್ಕುವ ಅಮೂಲ್ಯ ವಸ್ತುಗಳ ವ್ಯಾಪಾರ ನಡೆಸಿ ಹಣವಂತರಾದರು. ಆಸ್ತಿಪಾಸ್ತಿ ಮಾಡಿ ವಂಶಾನುಕ್ರಮ ವಾಗಿ ಜೀವನ ಸಾಗಿಸಿದರು.

"ಆ ಕಾರಾಮುರುವಿನ ಸಂತಾನದಲ್ಲಿ ಒಬ್ಬನಾದ ನಾನು ಪಾದ್ರಿಯಾದೆನು. ನನ್ನ ಹೆಸರು ಕಾರ್ಲೊ ಕಾರಾಮುರು. ನಾನು

ಕೆಲವು ಕಾಲ ಒಬ್ಬ ಇಂಗ್ಲಿಷ್ ವರ್ತಕನ ಸ್ನೇಹಿತನಾಗಿದ್ದೆನು. ಆದೇ ಕಾಲದಲ್ಲಿ ಬ್ರೇಜಿಲ್ ದೇಶದಲ್ಲಿ ನೆಲೆನಿಂತ ಬಿಳಿ ಜನರು— ವಿಶೇಷವಾಗಿ ಪೋರ್ತುಗೀಸರು—ಸ್ವತಂತ್ರರಾಗುವುದಕ್ಕೆ ಸ್ವಲ್ಪ ಕಾಲದ ಮೊದಲು ಸೈನ್ಯಕ್ಕೆ ಸೇರಿದ್ದ ನನ್ನ ಒಬ್ಬನೇ ತಮ್ಮನು ಸತ್ತುಹೋದನು. ಇದರಿಂದ ನನಗೆ ತುಂಬ ವ್ಯಸನವಾಯಿತು. ನಾನು ನನ್ನ ವೈದಿಕ ವೃತ್ತಿಯನ್ನು ಬಿಟ್ಟು ಈ ಕಾಡಿಗೆ ಬಂದು ಏಕಾಂಗಿಯಾಗಿ ವಾಸಮಾಡತೊಡಗಿದೆನು. ಈಗ ನನಗೆ ಈ ಸುತ್ತಮುತ್ತಲಿನ ಕಾಡೂ, ಕೋವಿಯೂ ಆಹಾರ ಪದಾರ್ಥವನ್ನು ಒದಗಿಸಿ ಕೊಡುತ್ತವೆ. ನನಗೆ ನನ್ನ ಹೊಟ್ಟೆ ತುಂಬಿದ ಮೇಲೆ ಬೇರೇನೂ ಕೆಲಸವಿಲ್ಲದುದರಿಂದ, ಇರುವ ಸಮಯವನ್ನೆಲ್ಲ ಬೈಬಲ್ ಓದುವುದರಲ್ಲೇ ಕಳೆಯುತ್ತಾ ಜ್ಞಾನದ ಬೆಳಕನ್ನು ನಿರೀಕ್ಷಿಸುತ್ತ ಇದ್ದೇನೆ. ಇದೇ ನನ್ನ ದೇಶದ ಮತ್ತು ನನ್ನ ಚರಿತ್ರೆ" ಎಂದು ಹೇಳಿ ಪಾದ್ರಿ ನಿಟ್ಟುಸಿರುಬಿಟ್ಟನು.

"ಹಾ! ಹಾ! ನೀವೆಯೋ ಕಾರ್ಲೊ ಪಾದ್ರಿ" ಎಂದು ಬಾರ್ನಿ ಮತ್ತು ಮಾರ್ಟಿನ್ ಆಶ್ಚರ್ಯವನ್ನು ವ್ಯಕ್ತಪಡಿಸಿದರು.

ಮತ್ತು, "ಹೌದು, ನಿಮ್ಮ ಕುಟುಂಬದ ಮತ್ತು ನಿಮ್ಮ ಕತೆ ಕೇಳಿ ನಮಗೆ ಆಶ್ಚರ್ಯವೂ ಬೇಸರವೂ ಆಯಿತು. ಈಗ ಈ ದೇಶದ ವಿಚಾರವಾಗಿ, ವ್ಯಾಪಾರ ವಹಿವಾಟಿನ ವಿಷಯವಾಗಿ ಸ್ವಲ್ಪ ಹೇಳಿ ನೋಡುವ" ಎಂದು ಮಾರ್ಟಿನ್ ಕೇಳಿದನು.

"ಅದನ್ನೂ ಹೇಳುತ್ತೇನೆ. ನೀವು ಕೇಳಬೇಕೆಂದೇ ಇಲ್ಲ. ನಾನೇ ಹೇಳುತ್ತೇನೆ." ಎಂದು ಕಾರ್ಲೊ ಪಾದ್ರಿ ಮುಂದು ವರಿಸಿದನು.

"ಈ ಬ್ರೆಜಿಲ್ ಪ್ರದೇಶ ಬಹಳ ವಿಸ್ತಾರವಾದುದು, ಸಂಪತ್ತಿನಿಂದ ತುಂಬಿದುದು. ಆದರೆ ಯಾರೂ ಆ ಸಂಪತ್ತನ್ನು ಎತ್ತಲು ಯತ್ನಿಸಲಿಲ್ಲ. ಇರುವ ಜನರೂ ಸೋಮಾರಿಗಳು. ಈ ದೇಶದ ವಿಸ್ತಾರವೇನು! ಅದು ಈ ದಕ್ಷಿಣ ಅಮೇರಿಕದ ಅರ್ಧದಷ್ಟಿದೆ.

ಹೆಚ್ಚು ಕಡಮೆ 2600 ಮೈಲು ಉದ್ದ, 2500 ಮೈಲು ಅಗಲ ಇದೆ. ಹಾಗೆಂದರೆ ತಿಳಿಯುದಾವರೆ, ಯುರೋಪಿಗಿಂತಲೂ ವಿಸ್ತಾರದಲ್ಲಿ ದೊಡ್ಡದೆಂದರೆ ತಿಳಿದೀತಷ್ಟೇ! ದೇಶದ ಬೆಟ್ಟ ಗುಡ್ಡಗಳು ಭಯಂಕರವಾದ ಕಾಡುಗಳಿಂದ, ಕಾಡು ಮೃಗಗಳಿಂದ ತುಂಬಿವೆ. ಹಾಗೆಯೇ ಹುಲ್ಲು ತುಂಬಿದ ಮೈದಾನು ಪ್ರದೇಶಕ್ಕೂ ಕಡಮೆ ಯಿಲ್ಲ. ಇನ್ನು ಈ ದೇಶದಲ್ಲಿ ಹರಿಯುವಷ್ಟು ನದಿಗಳು ಭೂಲೋಕ ದಲ್ಲೇ ಇರಲಿಕ್ಕಿಲ್ಲ. ನಾಲ್ಕು ಸಾವಿರ ಮೈಲಿಗಿಂತಲೂ ಉದ್ದಕ್ಕೆ ಹರಿಯುವ ಎಮೆಜಾನ್ ನದಿಯೂ, ಮನುಷ್ಯನ ಶರೀರದ ನರ ನಾಡಿಗಳಂತೆ ಒಂದಕ್ಕೊಂದು ಸೇರಿ ಹರಿಯುವ ಇತರ ನೂರಾರು ನದಿಗಳೂ ದೋಣಿಯ ಪ್ರಯಾಣಕ್ಕೆ ಬಹಳ ಅನುಕೂಲವಾಗಿವೆ.

"ಇನ್ನು ಈ ದೇಶದಲ್ಲಿರುವ ಪ್ರಾಣಿಗಳು! ಕಾಡು ಕುದುರೆಗಳು, ಕಾಡು ದನಗಳು, ಆಡುಗಳು, ಜಾಗುವರ್, ಟಾಪೀರ್, ಪೈಸಾ, ಮುಳ್ಳುಹಂದಿ ಮೊದಲಾದ ಎಷ್ಟೋ ಬಗೆಯ ಮೃಗಗಳಿವೆ. ಅವುಗಳಲ್ಲಿ ಕೆಲವನ್ನು ನೀವು ಈಗಾಗಲೇ ನೋಡಿರಬಹುದು. ಈ ದೇಶದ ಕಾಡುಗಳಲ್ಲಿರುವ ಗಿಡಮರಗಳನ್ನು ನೀವು ನೋಡಿರು ವಿರಿ. ಬತ್ತ, ಗೋಧಿ, ಜೋಳ, ಮರಗೆಣಸು, ಕೊಕ್ಕ, ಕಿತ್ತಳೆ, ಅಂಜೂರ, ಶುಂಠಿ, ಕಾಫಿ, ಕಬ್ಬು ಮೊದಲಾದ ಹಲವಾರು ಬಗೆಯ ಧಾನ್ಯಗಳೂ, ಹಣ್ಣುಗಳೂ, ತರಕಾರಿಗಳೂ ಈ ನಾಡಿನಲ್ಲಿ ಬೆಳೆಯುತ್ತವೆ.

"ಈ ದೇಶದಲ್ಲಿರುವ ಜನರು ಹೆಚ್ಚಿನವರು ಪೋರ್ತುಗೀಸ್ ಬುಡಕಟ್ಟಿಗೆ ಸೇರಿದವರು; ಮೂಲನಿವಾಸಿಗಳಾದ ರೆಡ್ಇಂಡಿಯ ನರು; ಗುಲಾಮರಾಗಿ ಬಂದ ನೀಗ್ರೋಗಳು. ಈ ದೇಶದಲ್ಲಿ ಕ್ರೈಸ್ತ ಧರ್ಮ ಪ್ರಚಾರದಲ್ಲಿದೆ. ಅದರಲ್ಲಿಯೂ ರೋಮನ್ ಕೆಥೋ ಲಿಕರೂ ಇತರ ಕ್ರೈಸ್ತರೂ ಸ್ನೇಹದಿಂದಲೇ ಇರುವರು."

"ಇಲ್ಲಿ ವಜ್ರದ ಗನಿಗಳಿವೆಯಂತಲ್ಲ? ಅವುಗಳ ವಿಷಯ ಹೇಳಲೇ ಇಲ್ಲ." ಎಂದು ಬಾರ್ನಿ ನಡುವೆ ಬಾಯಿ ಹಾಕಿದನು.

"ಹೌದು, ವಜ್ರದ ಗನಿಗಳಿವೆ. ವಜ್ರ ದೊರಕುತ್ತದೆ. ಆ ವ್ಯಾಪಾರದಿಂದ ಎಷ್ಟೋ ಜನರು ಧನಿಕರಾಗಿದ್ದಾರೆ. ಕೆಲವು ಸಮಯದ ಹಿಂದೆ ದೊರಕಿದ ಒಂದು ವಜ್ರಕ್ಕೆ ನಲುವತ್ತು ಸಾವಿರ ಪೌಂಡುಗಳಷ್ಟು ಬೆಲೆ ಬಂದಿದೆ."

"ಹಾ! ಹಾಗಾದರೆ ಜನರು ಯಾಕೆ ವಜ್ರದ ಗನಿಗಳಲ್ಲೇ ಕೆಲಸಮಾಡುವುದಿಲ್ಲ. ಅದರಿಂದ ಸುಲಭದಲ್ಲಿ ಧನಿಕರಾಗಬಹುದಲ್ಲ!" ಎಂದು ಬಾರ್ನಿ ಮತ್ತೊಮ್ಮೆ ಆಶ್ಚರ್ಯವನ್ನು ಸೂಚಿಸಿದನು.

"ನೀನು ಏನೋ ಹಾಗೆ ಹೇಳ ಬಹುದು. ಆದರೆ ವಜ್ರ ತಿಂದು ಹೊಟ್ಟೆ ತುಂಬಿಸಲಿಕ್ಕಾಗುತ್ತದೆಯೇ? ಬದಲಾಗಿ ವಜ್ರ ತಿಂದರೆ ಸಾಯುಬಹುದು." ಪಾದ್ರಿ ಬೇಸರದಿಂದ ನುಡಿದ.

"ಸರಿ, ಸರಿ, ನೀವು ಹೇಳಿದ್ದೇ ಸರಿ. ನನಗೆ ತಲೆಗೆ ಹೋಗಲಿಲ್ಲ. ನಾನು ಆಹಾರದ ವಿಷಯ ಆಲೋಚಿಸಲೇ ಇಲ್ಲ. ಮುಂದುವರಿಸಿರಿ" ಎಂದು ಬಾರ್ನಿ ಸುಮ್ಮಗಾದ.

"ಇಲ್ಲಿ ಕೇಳಿ. ಈ ವಜ್ರದ ಗನಿಗಳಿಂದ, ಬಂಗಾರದ ಗನಿಗಳಿಂದ ಅಷ್ಟೊಂದು ಲಾಭವಿಲ್ಲ. ಈ ದೇಶದಲ್ಲಿ ಕೃಷಿಯಿಂದಲೇ ಲಾಭ ಹೆಚ್ಚು. ಕಾಫಿ ಮತ್ತು ಕಬ್ಬಿನ ವ್ಯವಸಾಯ ಪ್ರಾರಂಭಿಸಿದಾಗ, ಅವುಗಳು ಪೂರ್ಣ ಫಲ ಕೊಟ್ಟಾಗ ಆ ಕೃಷಿಯ ಎರಡು ವರ್ಷಗಳ ಉತ್ಪತ್ತಿ, ವಜ್ರದ ಗನಿಗಳ, ಬಂಗಾರದ ಗನಿಗಳ ಎಂಭತ್ತು ವರ್ಷಗಳ ಉತ್ಪತ್ತಿಗೆ ಸಮಾನವಾಗಿತ್ತು! ಈ ಮಾತನ್ನು ಬೇಕಾದರೆ ನಂಬಿ, ಇಲ್ಲವಾದರೆ ಬಿಡಿ. ಹಾಗಿದ್ದರೂ ಈ ದೇಶದ ಜನರು ಇನ್ನೂ ನೆಮ್ಮದಿಯಾಗಿಲ್ಲ. ತಮ್ಮ ದೇಶವನ್ನು ಅಭಿವೃದ್ಧಿಗೊಳಿಸಲು ಇವರು ಇನ್ನೂ ದುಡಿಯ ಬೇಕಾಗಿದೆ; ದೇಶದ ನೆಮ್ಮದಿಗೆ, ಸುಖ ಶಾಂತಿಗಳಿಗೆ ಇನ್ನೂ ದುಡಿಯ ಬೇಕಾಗಿದೆ."

"ಇಷ್ಟೆಲ್ಲ ಸಂಪತ್ತಿರುವ ದೇಶಕ್ಕೆ ಇನ್ನೇನು ಬೇಕು? ಈ ಉಷ್ಣ ದೇಶದ ಜನರು ತುಸು ಸೋಮಾರಿಗಳೆಂದು ತೋರುತ್ತದೆ.

ಅವರಲ್ಲಿ ಉತ್ಸಾಹ ಕಡಿಮೆ. ಇನ್ನೂ ಹೆಚ್ಚು ಉತ್ಸಾಹ ಬೇಕು. ಅಲ್ಲವೇ?" ಎಂದ ಮಾರ್ಟಿನ್.

"ಉತ್ಸಾಹ! ಎಂತಹ ಉತ್ಸಾಹ! ಅದೊಂದೂ ಬೇಡ. ಕೊರತೆ ಇರುವುದು ಒಂದೇ ವಿಷಯದಲ್ಲಿ. ಬ್ರೆಜಿಲ್ ದೇಶಕ್ಕೆ ಬೇಕಾದ ಎಲ್ಲ ಸಂಪತ್ತುಗಳೂ ಇವೆ. ಒಂದೇ ಒಂದು ಕೊರತೆ. ದೇವರಲ್ಲಿ ವಿಶ್ವಾಸ, ಧರ್ಮದಲ್ಲಿ ನಂಬಿಕೆ, ಸತ್ಯದಲ್ಲಿ ಭರವಸೆ ಇವು ಮಾತ್ರ ಕಡಿಮೆ. ಅದೊಂದಿದ್ದರೆ ಈ ದೇಶಕ್ಕೆ ಸಮನಾದ ದೇಶ ಲೋಕದಲ್ಲೇ ಇರಲಾರದು" ಎಂದು ಪಾದ್ರಿ ತನ್ನ ದೇಶದ ವಾರ್ತೆಯನ್ನು ಪೂರ್ತಿಸಿದ.

## ಹತ್ತು

ಬಾರ್ನಿಯೂ ಮಾರ್ಟಿನನೂ ಕಾರ್ಲೊ ಪಾದ್ರಿಯ ಆತಿಥ್ಯ ದಲ್ಲಿ ಹಲವು ದಿನಗಳನ್ನು ಕಳೆದರು. ಪ್ರತಿದಿನವೂ ಅವರು ಬೇಟೆಗೆ ಹೋಗುತ್ತಿದ್ದರು. ಒಂದಲ್ಲ ಒಂದು ಪ್ರಾಣಿಯನ್ನು ಕೊಂದು ಊಟ ತಯಾರಿಸುತ್ತಿದ್ದರು.

ಹೀಗಿರುವಾಗ ಒಂದು ದಿನ ಪಾದ್ರಿ ಬಾರ್ನಿಯನ್ನೂ ಮಾರ್ಟಿನನನ್ನೂ ಬೆಳಗ್ಗೆ ಎಂದಿಗಿಂತ ಬೇಗನೆ ಎಚ್ಚರಿಸಿದನು; ಬೇಟೆಗೆ ಹೊರಡಲು ಸಿದ್ಧರಾಗಿರೆಂದು ಹೇಳಿದನು. ಬಾರ್ನಿಯೂ ಮಾರ್ಟಿನನೂ ಪಾದ್ರಿ ಕೊಟ್ಟಿದ್ದ ನಿಲುವಂಗಿಗಳನ್ನು ಧರಿಸಿ, ಹುಲ್ಲಿನ ಹೇಟುಗಳನ್ನು ಇಟ್ಟು, ಬೇಟೆಗೆ ಹೊರಡಲು ಸಿದ್ಧರಾದರು. ಪಾದ್ರಿ ತನ್ನ ಜೋಡು ನಳಿಗೆ ಕೋವಿಯನ್ನು ಹೆಗಲ ಮೇಲೆ ಇರಿಸಿ ಕೊಂಡು ಕೈಯಲ್ಲೊಂದು ಉದ್ದವಾದ ಬರ್ಚಿಯನ್ನೂ ಹಿಡಿದು ಕೊಂಡನು. ಬಾರ್ನಿ ತನ್ನ ಪಿಸ್ತೂಲನ್ನೂ, ಪಾದ್ರಿ ಕೊಟ್ಟ ಉದ್ದ ವಾದ ಖಡ್ಗವನ್ನೂ ತೆಗೆದುಕೊಂಡನು. ಮಾರ್ಟಿನ್ ಪಾದ್ರಿ ಕೊಟ್ಟ ಸಣ್ಣ ಖಡ್ಗವನ್ನೂ ಬಿಲ್ಲು ಬಾಣಗಳನ್ನೂ ತೆಗೆದುಕೊಂಡನು. ಕಾರ್ಲೊ ಪಾದ್ರಿ ಮಾರ್ಟಿನನಿಗೆ ಬಾಣಗಳನ್ನು ಪ್ರಯೋಗಿಸಲು ಆ ಮೊದಲೇ ಕಲಿಸಿದ್ದನು.

ಮೂವರೂ ಗುಡಿಸಲಿಂದ ಹೊರಟರು. ಬೇಟೆಗೆ ಹೋಗು ವಾಗ ಎಂದೂ ಬರ್ಚಿ ಹಿಡಿಯದ ಪಾದ್ರಿ ಇಂದೇಕೆ ಬರ್ಚಿ ಹಿಡಿದಿರುವನೆಂದು ಬಾರ್ನಿ ಯೋಚಿಸಿದನು; ಹಾಗೆಯೇ ಬರ್ಚಿ ಏಕೆಂದೂ ಪಾದ್ರಿಯೊಡನೆ ಕೇಳಿದ. "ಅದೋ, ಹೇಳುತ್ತೇನೆ. ನಿನ್ನೆ ನಾನು ನನ್ನ ದನಗಳನ್ನು ನೋಡಲು ಹೋಗಿದ್ದಾಗ ಒಂದು ಹುಲಿಯನ್ನು ಕಂಡಿದ್ದೆ. ಇಂದೂ ಆ ಹುಲಿ ಸಿಕ್ಕಬಹುದು. ಅದಕ್ಕಾಗಿ ಈ ಬರ್ಚಿ; ನಾವಿಂದು ನನ್ನ ದನಗಳಿರುವ ಹುಲ್ಲುಗಾವ ಲಿಗೂ ಹೋಗುವ" ಎಂದು ಪಾದ್ರಿ ದಾರಿ ಮುಂದುವರಿಸಿದನು.

ಆ ಮೂವರು ಹಾಗೆಯೇ ಮುಂದುವರಿಯುತ್ತಿದ್ದಾಗ ಪಾದ್ರಿ ಫಕ್ಕನೆ ನಿಂತುಬಿಟ್ಟನು. ಸುಮಾರು ಐವತ್ತು ಗಜ ದೂರ ದಲ್ಲಿದ್ದ ಒಂದು ಹಕ್ಕಿಯನ್ನು ತೋರಿಸಿದನು. ಆ ಹಕ್ಕಿ ಉರು ಟಾದ ಕಲ್ಲಿನಂತಿರುವ ಯಾವುದೋ ಒಂದು ವಸ್ತುವನ್ನು ಕೊಕ್ಕಿ ನಿಂದ ಕುಕ್ಕುತಿತ್ತು. ಅವರು ಅದನ್ನೇ ನೋಡುತ್ತ ನಿಂತರು. ತುಸು ಹೊತ್ತಿನಲ್ಲಿ ಆ ಹಕ್ಕಿ ಹಾರಿ ಹೋಯಿತು. ಆಗ ಆ ಕಲ್ಲಿ ನಂತೆ ಕಾಣಿಸುತಿದ್ದ ವಸ್ತು ಹಂದಾಡಿದಂತೆ ಕಾಣಿಸಿತು! ಎದ್ದು ಓಡುವುದೂ, ಒಂದು ಬಿಲ ಕೊರೆದು ನುಗ್ಗುವುದೂ ಕಾಣಿಸಿತು. ಇದೆಂತಹ ವಿಚಿತ್ರ! ಅದು 'ಅರಮುದಿಲ್ಲೊ' ಎಂಬ ಪ್ರಾಣಿ ಯೆಂದೂ, ಶತ್ರುಗಳನ್ನು ಕಂಡೊಡನೆಯೇ ಕೈಕಾಲುಗಳನ್ನು ಮುದುಡಿಸಿ, ಕಲ್ಲಿನಂತೆ ಗಟ್ಟಿಯಾಗಿ ಬಿದ್ದುಕೊಳ್ಳುತ್ತದೆಂದೂ, ಪಾದ್ರಿ ಆ ಪ್ರಾಣಿಯ ವಿಷಯವಾಗಿ ಹೇಳಿದನು.

ಆ ದಿನ ಅವರು ಕಾಡಿನಲ್ಲಿ ಬಹುದೂರ ಹೋದರು. ಬಾರ್ನಿಯೂ ಮಾರ್ಟಿನನೂ ತಾವು ಅಷ್ಟರ ವರೆಗೆ ಕಂಡು ಕೇಳದ ಹಲವು ಬಗೆಯ ಪಕ್ಷಿಗಳನ್ನು ನೋಡಿದರು; ಅವುಗಳ ಬಣ್ಣವನ್ನು ನೋಡಿ, ಸ್ವರವನ್ನು ಕೇಳಿ ಸಂತೋಷಿಸಿದರು. ಹಲವು ಬಗೆಯ ಕಪಿಗಳನ್ನೂ, ಅವುಗಳ ಚೇಷ್ಟೆಯನ್ನೂ ನೋಡಿ ಆನಂದಿಸಿದರು; ಆ ಕಪಿಗಳಲ್ಲಿಯೂ ನೀಲ ಮುಖದ, ಕೆಂಪು ಮೈಯ ಜಾತಿಯನ್ನು

ನೋಡಿದಾಗ ಅವರಿಗೆ ಆದಷ್ಟು ಆನಂದ ಇನ್ನಾವುದರಿಂದಲೂ ಆಗಿಲ್ಲ. ಅವರು ಯಾವುದೊಂದು ಪ್ರಾಣಿಯನ್ನೂ ಕೊಲ್ಲದೆ ಕಾಡಿನಲ್ಲಿ ಮುಂದುವರಿಯುತ್ತಲೇ ಇದ್ದರು. ಎಷ್ಟೋ ದೂರ ಹೋದ ಮೇಲೆ ಆಯಾಸ ಪರಿಹಾರಕ್ಕೆಂದು ಒಂದು ಮರದ ಕೆಳಗೆ ಕುಳಿತರು. ಅವರು ಅಲ್ಲಿ ಕುಳಿತಿದ್ದಾಗ ಒಂದು ವಿಚಿತ್ರ ಪಕ್ಷಿಯ ಸ್ವರವನ್ನು ಕೇಳಿದರು. ಆ ಶಬ್ದ ಕಮ್ಮಾರನು ಸುತ್ತಿಗೆಯಿಂದ ಕಬ್ಬಿಣವನ್ನು ಗುದ್ದುವಾಗ ಕೇಳಿಸುವ ಶಬ್ದದಂತೆ ಕೇಳಿಸುತಿತ್ತು. ಅದೇ 'ಉರಿಪೊಂಗಸ್' ಅಥವಾ ಗಂಟೆಯ ಹಕ್ಕಿ ಎಂದು ಪಾದ್ರಿ ಹೇಳಿದನು. ಆಯಾಸ ತುಸು ಪರಿಹಾರವಾದೊಡನೆಯೇ ಅವರು ಕುಳಿತಲ್ಲಿಂದ ಎದ್ದು ಮುಂದುವರಿದರು.

ಅವರು ಹತ್ತು ಹಜ್ಜೆ ಮುಂದುವರಿದಿದ್ದರಷ್ಟೆ. ಆಗ ಅವರ ಎದುರಿಗೆ ದಾರಿಗೆ ಅಡ್ಡವಾಗಿ ಹಲ್ಲಿಯ ಆಕಾರದ ಒಂದು ವಿಚಿತ್ರ ಪ್ರಾಣಿ ಓಡುವುದು ಕಾಣಿಸಿತು. ಅದು ಸುಮಾರು ಮೂರು ಅಡಿ ಉದ್ದವಿತ್ತು. ಅದರ ಮೈಮೇಲೆ ಮಿನುಗುವ ಪರೆಗಳಿದ್ದುವು. ಬಾರ್ನಿಯೂ ಮಾರ್ಟಿನನೂ ತಮ್ಮ ಆಯುಧಗಳನ್ನು ಸಿದ್ಧಗೊಳಿಸಿ ಗುರಿಯಿಡುವ ಮೊದಲೇ ಪಾದ್ರಿ, ತನ್ನ ಕೋಪಿ ಬರ್ಚಿಗಳನ್ನು ನೆಲಕ್ಕೆ ಒಗೆದು, ಓಡಿಹೋಗಿ, ಆ ಪ್ರಾಣಿಯ ಬಾಲ ಹಿಡಿದು, ಎತ್ತಿ ಮೂರುನಾಲ್ಕು ಸುತ್ತು ತಿರುಗಿಸಿ ದೊಪ್ಪನೆ ಒಂದು ಮರಕ್ಕೆ ಹೊಡೆದನು. ಆ ಪ್ರಾಣಿ ತಲೆ ಒಡೆದು, ನೆತ್ತರು ಕಾರಿ ಸತ್ತು ಹೋಯಿತು. ಅದು ಉಡುವೆಂಬ ಪ್ರಾಣಿಯೆಂದೂ ಅದರ ಮಾಂಸ ಅತಿ ರುಚಿಯೆಂದೂ, ಅದಕ್ಕಿಂತಲೂ ದೊಡ್ಡ ಉಡುಗಳಿವೆಯೆಂತಲೂ ಪಾದ್ರಿ ಹೇಳಿದನು. ಆ ಮೇಲೆ ಆ ಸತ್ತ ಉಡುವನ್ನು ಒಂದು ಪೊದರಲ್ಲಿಟ್ಟು, ಇತರ ಪ್ರಾಣಿಗಳು ಅದನ್ನು ತಿನ್ನದಂತೆ, ಅದರ ಮೇಲೆ ಕಲ್ಲುಗಳನ್ನು ಹೇರಿ ಮುಂದುವರಿದರು.

ಅವರು ಹಾಗೆಯೇ ಕಾಡಿನ ದಾರಿಯಲ್ಲಿ ಮುಂದುವರಿದು, ಒಂದು ಸೊಗಸಾದ ವನಕ್ಕೆ ಬಂದರು. ಅಲ್ಲಿ ಮರಗಳು ಸ್ವಾಭಾ-

ವಿಕವಾಗಿ ಬೆಳೆದಿದ್ದರೂ ನೋಟಕ್ಕೆ ನೆಟ್ಟು ಬೆಳೆಸಿದ ಮರಗಳಂತೆ ಕಾಣಿಸುತ್ತಿದ್ದುವು. "ಇವುಗಳೇ ನನಗೆ ಹಾಲು ಕೊಡುವ ದನಗಳು. ನಿಮಗೆ ಬೇಕಾದಷ್ಟು ಕೆನೆಹಾಲು ಕುಡಿಸುತ್ತೇನೆ." ಎಂದು ಪಾದ್ರಿ ತನ್ನ ಬಳಿಯಲ್ಲಿದ್ದ ಕೈ ಕೊಡಲಿಯಿಂದ ಒಂದು ಮರಕ್ಕೆ ಒಂದು ಸಣ್ಣ ಗಡಿ ಹಾಕಿದನು. "ಈ ದನಗಳು ನಿಮ್ಮೆಲ್ಲರ ದನಗಳಂತಲ್ಲ; ಇವುಗಳನ್ನು ಸಾಕುವ, ಕಾಪಾಡುವ ಕೆಲಸವಿಲ್ಲ. ತಾವಾಗಿಯೇ ಬೆಳೆಯುತ್ತವೆ." ಎಂದು ಹೇಳುತ್ತಾ ಪಾದ್ರಿ ತನ್ನ ಹೆಗಲ ಮೇಲಿದ್ದ ಚೀಲದಿಂದ ಬಟ್ಟಲೊಂದನ್ನು ತೆಗೆದು ಆ ಮರದ ಗಾಯಕ್ಕೆ ಹಿಡಿದನು. ಹಾಲಿನಂತೆ ಬೆಳ್ಳಗಾದ, ದಪ್ಪವಾದ ರಸ ಆ ಮರದಿಂದ ಸುರಿಯಿತು. ಅದನ್ನು ಬಾರ್ನಿಗೂ ಮಾರ್ಟಿನನಿಗೂ ಕುಡಿಯ ಕೊಟ್ಟನು. ಅವರಿಬ್ಬರೂ ಆ ರಸವನ್ನು ಕುಡಿದು, ಇದು ಹಾಲಿಗಿಂತಲೂ ರುಚಿಯಾಗಿದೆ, ಎಂದರು. "ಇದು ಹಾಲಿನಂತೆ ರುಚಿಯೂ ಪರಿಮಳವೂ ಉಳ್ಳದ್ದಾಗಿದ್ದು, ಗಾಳಿಗೆ ಇಟ್ಟರೆ ಆರಿ ಗಟ್ಟಿಯಾಗುತ್ತದೆ. ಆಗ ಇದಕ್ಕೆ ಸ್ಥಿತಿಸ್ಥಾಪಕ ಗುಣ ಇರುತ್ತದೆ. ಇದನ್ನು ಹಾಲಿನಂತೆ ಉಪಯೋಗಿಸುವುದು ಮಾತ್ರ ಅಲ್ಲ, ಇದು ಗೋಂದಿನಂತೆ ಅಂಟಿಗಾಗಿಯೂ ಉಪಯೋಗಕರವಾಗಿದೆ." ಎಂದು ಪಾದ್ರಿ ಆ ಮರದ ರಸದ ವಿಷಯವನ್ನೆಲ್ಲ ವಿಷದವಾಗಿ ವಿವರಿಸಿದನು.

ಮತ್ತೆ ಅವರು ಅಲ್ಲಿಂದ ಮುಂದುವರಿದರು. ಸಮತಟ್ಟಾದ ಆ ಕಾಡಿನಲ್ಲಿ ಮುಂದುವರಿಯುತ್ತಿದ್ದಾಗ ಒಂದು ಬೆಟ್ಟಗಳ ಸಾಲು ಕಾಣಿಸಿತು. ಆ ಬೆಟ್ಟಗಳ ಸಾಲು ಬ್ರೇಜಿಲ್ ದೇಶಕ್ಕೆ ಅಡ್ಡವಾಗಿ ಬಹಳ ದೂರದ ವರೆಗೆ ಹರಡಿಕೊಂಡಿದೆಯೆಂದೂ ಆ ಬೆಟ್ಟಗಳಲ್ಲಿ ದೊಡ್ಡ ದೊಡ್ಡ ಬಂಡೆಕಲ್ಲುಗಳೂ, ಗುಹೆಗಳೂ, ಗುಹೆಗಳಲ್ಲಿ ಕ್ರೂರ ಜಂತುಗಳೂ ಇವೆಯೆಂದೂ ಪಾದ್ರಿ ಹೇಳುತ್ತಿದ್ದಂತೆಯೇ ಅವರು ದೊಡ್ಡ ದೊಡ್ಡ ಬಂಡೆಕಲ್ಲುಗಳಿರುವ ಬೆಟ್ಟವೊಂದರ ಬಳಿ ಸೇರಿದರು.

ಆ ಬೆಟ್ಟದ ಬದಿಯಲ್ಲಿ ಬಂಡೆಗಳೆಡೆಯಲ್ಲಿ ಹಲವಾರು ಗುಹೆಗಳಿದ್ದುವು. ಗುಹೆಗಳ ಬಳಿ ಸೇರಿದಾಗ ಪಾದ್ರಿ, "ನಾವೀಗ ಜಾಗ್ರತೆಯಿಂದಿರಬೇಕು; ಹುಶಾರಾಗಿರಬೇಕು. ಇಲ್ಲವಾದರೆ ಕೆಲಸ ಕೆಟ್ಟೀತು. ಈ ಗುಹೆಗಳಲ್ಲಿ ಯಾವುದಾದರೂ ಹುಲಿ ಇದ್ದೇ ಇರಬೇಕು." ಎಂದು ಹೇಳಿ ತನ್ನ ಕೋವಿಯನ್ನು ಅಲ್ಲೇ ಬಂಡೆಗೆ ಒರಗಿಸಿಟ್ಟು, ಬಳಿಯಲ್ಲೇ ಇದ್ದ ದೊಡ್ಡ ಗುಹೆಯೊಳಗೆ ನಿಲುಕಿ, ಒಳಗೆ ಒಂದು ಕಲ್ಲೆಸೆದನು. ಕಲ್ಲು ಬಿದ್ದ ಸದ್ದು ಕೇಳಿಸಿತೇ ಹೊರತು ಬೇರೇನೂ ಶಬ್ದ ಹೊರಡಲಿಲ್ಲ; ಇದರಲ್ಲಿ ಏನೂ ಇಲ್ಲವೆಂದು ಪಾದ್ರಿ ಮುಂದೆ ಮುಂದೆ ಇರುವ ಗುಹೆಗಳನ್ನು ನಿರೀಕ್ಷಿಸುತ್ತ ಮುಂದುವರಿದನು. ಆ ವೇಳೆಯಲ್ಲಿ ಬಾರ್ನಿ ಪಾದ್ರಿ ಕೋವಿಯನ್ನು ಒರಗಿಸಿ ಇಟ್ಟಲ್ಲೇ ಇದ್ದ ಸಣ್ಣ ಗುಹೆಯೊಳಗೆ ನಿಲುಕಿ ನೋಡಿದನು. ಒಳಗಿಂದ ಎರಡು ವಜ್ರಗಳು ಹೊಳೆಯುವಂತೆ ಕಂಡಿತು. "ಇಲ್ಲಿ ನೋಡು, ವಜ್ರದ ಗನಿ! ಎಂದು ಬಾರ್ನಿ ಉದ್ಗರಿಸಿದನು! ಅಷ್ಟರಲ್ಲಿ ಪಾದ್ರಿ "ಮೌನವಾಗಿರು" ಎಂದು ಸೂಚಿಸುತ್ತ, ತನ್ನ ಬರ್ಚಿಯನ್ನು ಮುಂದೆ ಚಾಚುತ್ತ ಆ ಗುಹೆಯ ಬಳಿಗೆ ಬಂದು ಬಾರ್ನಿಯನ್ನು ಆಚೆ ದೂಡಿ, ಗುಹೆಯೊಳಗೆ ಗುರಿಯಿಟ್ಟು ಹೊಡೆಯಲು ಮಾರ್ಟಿನನಿಗೆ ಸೂಚಿಸಿದನು.

ಮಾರ್ಟಿನ್ ಗುಹೆಯೊಳಗೆ ಗುರಿಯಿಟ್ಟು ಬಾಣಹೊಡೆದಾಗ ಆ ಬೆಟ್ಟಗಳ ಸಾಲೇ ಜರಿದು ಹೋಗುತ್ತದೋ ಎನ್ನುವಂತಹ ಭಯಂಕರ ಗರ್ಜನೆ ಕೇಳಿಸಿತು. ಗರ್ಜನೆಯೊಂದಿಗೆ ಭಯಂಕರ ಹುಲಿಯೊಂದು ಹೊರಗೆ ಹಾರುವುದೂ ಕಾಣಿಸಿತು. ಪಾದ್ರಿ ಆಗಲೇ ಹುಲಿಯ ಎದೆಗೆ ಬರ್ಚಿಯನ್ನು ಗುರಿ ಇಟ್ಟು ಚುಚ್ಚಿದನು. ಬರ್ಚಿ ಹುಲಿಯ ಎದೆಯನ್ನು ಹೊಕ್ಕು ಇನ್ನೊಂದು ಕಡೆಯಿಂದ ಹೊರಟಿತು. ಬರ್ಚಿಯ ಗಾಯದೊಂದಿಗೆ ಇನ್ನೊಂದು ಭಯಂಕರ ಗರ್ಜನೆಕೊಟ್ಟು ಹುಲಿ ಪಾದ್ರಿಯ ಮೇಲೆರಗಿತು. ಅಷ್ಟರಲ್ಲಿ ಬಾರ್ನಿ ತನ್ನ ಪಿಸ್ತೂಲನ್ನು ಹುಲಿಯ ತಲೆಗೆ ಗುರಿಯಿಟ್ಟನು.

ಅದೃಷ್ಟವಶದಿಂದ ಆ ಪಿಸ್ತೂಲಿಗೆ ಮದ್ದು ತುಂಬಿಸಿರಲಿಲ್ಲ. ಮದ್ದು ತುಂಬಿಸಿದ್ದರೆ ಹುಲಿಯ ತಲೆಯೊಂದಿಗೆ ಪಾದ್ರಿಯ ತಲೆಯೂ ಹಾರಿ ಹೋಗುತಿತ್ತು! ಇಷ್ಟರಲ್ಲಿ ಮಾರ್ಟಿನ್ ಅಲ್ಲೇ ಒರಗಿಸಿಟ್ಟಿದ್ದ ಪಾದ್ರಿಯ ಕೋವಿ ತೆಗೆದು ಹುಲಿಗೆ ಗುರಿಯಿಟ್ಟನು. ಮೊದಲೇ ಗಾಯಗೊಂಡಿದ್ದ ಹುಲಿ ಗುಂಡಿನೇಟಿಗೆ ಸತ್ತು ನೆಲಕ್ಕೆ ಒರಗಿತು.

ಹುಲಿ ಮೇಲೆ ಬಿದ್ದರೂ ಪಾದ್ರಿಗೆ ವಿಶೇಷ ಗಾಯವಾಗಿರಲಿಲ್ಲ. ಅವನು ಹುಲಿ ಆಚೆ ಬಿದ್ದೊಡನೆ ಬಿದ್ದಲ್ಲಿಂದ ಎದ್ದನು. ಅವನ ಮೈಯೆಲ್ಲ ಹುಲಿಯ ಗಾಯದ ನೆತ್ತರಿಂದ ಕೆಂಪಾಗಿತ್ತು.

ಆಗಲೇ ಹೊತ್ತು ಇಳಿಯ ತೊಡಗಿತ್ತು. ಮತ್ತೆ ಆ ಮೂವರು ತಡ ಮಾಡದೆ, ಹುಲಿಯ ಚರ್ಮ ಸುಲಿದು, ಕಟ್ಟಿ ಹೊತ್ತುಕೊಂಡು, ಹಿಂದಿರುಗಿದರು. ಹಿಂದಿರುಗಿ ಬರುತ್ತಾ ತಾವು ಕೊಂದು ಅಡಗಿಸಿಟ್ಟಿದ್ದ ಉಡುವನ್ನು ಹೊತ್ತುಕೊಂಡರು. ಅಲ್ಲಿಂದ ಅವರು ಬೆಳಗ್ಗೆ ಕಂಡ ಅರಮದಿಲ್ಲೋ ಪ್ರಾಣಿ ಇದ್ದಲ್ಲಿಗೆ ಬಂದರು. ಪಾದ್ರಿ ತನ್ನ ಗಂಟು ಮೂಟೆಗಳನ್ನು ಕೆಳಗಿಳಿಸಿ, ಮಾರ್ಟಿನ್ ಬಾರ್ನಿಯರಿಗೂ ಅವರ ಗಂಟುಮೂಟೆಗಳನ್ನು ಕೆಳಗೆ ಇರಿಸುವಂತೆ ಹೇಳಿ, ಕಸ ಕಡ್ಡಿ ಹೆಕ್ಕಿತರಲು ಹೇಳಿದನು. ಮಾರ್ಟಿನ್ ಬಾರ್ನಿಯರು ಹೆಕ್ಕಿತಂದ ಕಸಕಡ್ಡಿಗಳನ್ನು ಅರಮದಿಲ್ಲೋ ಕೊರೆದಿದ್ದ ಬಿಲದ ಬಾಯಿಗೆ ತುರುಕಿ ಚಕಮುಕಿ ಕಲ್ಲಿನಿಂದ ಬೆಂಕಿ ಉರಿಸಿದನು. ಬೆಂಕಿಯ ಹೊಗೆಗೆ, ಉರಿಗೆ ಒಳಗೆ ಅಡಗಿದ್ದ ಅರಮದಿಲ್ಲೋ ಹೊರಗೆ ಬಂದು ಕೈಕಾಲು, ತಲೆಬಾಲಗಳನ್ನು ಮುರುಟಿಸಿಕೊಂಡು ಕಲ್ಲಿನಂತೆ ಬಿದ್ದುಕೊಂಡಿತು. ಪಾದ್ರಿ ಕೈಯಲ್ಲಿದ್ದ ಖಡ್ಗದಿಂದ ಬಡಪ್ರಾಣಿಯನ್ನು ಮುಗಿಸಿಬಿಟ್ಟನು. ಅಂದಿಗೆ ಆ ಬೇಟೆ ಮುಗಿಯಿತು.

## ಹನ್ನೊಂದು

ಬಾರ್ನಿಗೂ ಮಾರ್ಟಿನನಿಗೂ ಆ ಕಾಡಿನಲ್ಲಿ ಪಾದ್ರಿಯೊಡನೆ ಬೇಟೆ ಜೀವನ ಸಾಕೆಂದು ತೋರತೊಡಗಿತು; ಅಲ್ಲಿಂದ ಹೊರಟು ಆ ದೇಶವನ್ನು ನೋಡಬೇಕೆಂಬ ಆಸೆ ಹೆಚ್ಚಿತು. ಮಾರ್ಟಿನನಿಗೆ ಆ ಅಮೆಜಾನ ನದಿಯನ್ನೊಮ್ಮೆ ನೋಡಬೇಕೆಂಬ ಲವಲವಿಕೆ. ಬಾರ್ನಿಗೆ ವಜ್ರದ ಗನಿಗಳನ್ನು ಕಂಡು ಕೆಲವು ವಜ್ರಗಳನ್ನು ಪಡೆಯ ಬೇಕೆಂಬ ಇಚ್ಛೆ. ವಜ್ರದ ಗನಿಗಳಿಂದ ಕಿಸೆತುಂಬ ವಜ್ರಗಳನ್ನು ಹೆಕ್ಕಿಕೊಂಡು ತನ್ನ ದೇಶವಾದ ಅಯರ್ಲೆಂಡಿಗೆ ಹೋಗಿ ರಾಜ ನಂತೆ ಸುಖವಾಗಿ ಕಾಲಕಳೆಯಬಹುದೆಂದು ಬಾರ್ನಿ ಮನಸ್ಸಿ ನಲ್ಲೇ ಮಂಡಿಗೆ ಹಾಕುತ್ತಿದ್ದನು.

ಒಂದು ದಿನ ಬಾರ್ನಿಯೂ ಮಾರ್ಟಿನನೂ ತಮಗೆ ಈ ದೇಶವನ್ನು ಸುತ್ತಾಡಿ ಬರಬೇಕೆಂದು ಆಸೆಯಿದೆ ಎಂದು ಪಾದ್ರಿ ಯೊಡನೆ ಪ್ರಸ್ತಾವಿಸಿದರು. ಅದಕ್ಕೆ ಪಾದ್ರಿ, "ಹೌದು, ನೀವು ಇಲ್ಲಿ ಸುಮ್ಮನೆ ಕುಳಿತುಕೊಳ್ಳುವುದಲ್ಲ; ದೇಶ ಸಂಚಾರ ಮಾಡಬೇಕು. ದೇಶದ ವಿಶೇಷಗಳನ್ನು ಕಾಣಬೇಕು. ನಾನು ಪ್ರತಿ ವರ್ಷ ಕೊಮ್ಮೆ ಊರು ಸುತ್ತಿ ವ್ಯಾಪಾರಮಾಡಿ ಬರುವುದಿದೆ. ಇನ್ನು ಎಂಟು ಹತ್ತು ದಿನಗಳಲ್ಲಿ ಹೊರಡುತ್ತೇನೆ. ನೀವೂ ಬನ್ನಿರಿ. ಆದರೆ ನೀವು ಒಂದು ಕೆಲಸ ಮಾಡಬೇಕು. ನನ್ನ ಹೊರೆ ಹೊತ್ತ ಹೇಸರ ಕತ್ತೆಗಳನ್ನು ಹೊಡೆಯುವ ಕೆಲಸವನ್ನು ನೀವು ವಹಿಸಿ ಕೊಳ್ಳಬೇಕು ಆದೀತೋ?" ಎಂದು ಕೇಳಿದನು.

ಬಾರ್ನಿಗೂ ಮಾರ್ಟಿನನಿಗೂ ಪಾದ್ರಿಯ ಮಾತು ಕೇಳಿ ಸಂತೋಷವಾಯಿತು. ತಮಗೆ ಅಷ್ಟೊಂದು ಉಪಕಾರ ಮಾಡಿದ ಪಾದ್ರಿಗೆ ಏನಾದರೂ ಪ್ರತಿ ಉಪಕಾರ ಮಾಡಬೇಕೆಂದು ಅವರು ಯೋಚಿಸುತ್ತಿದ್ದರು. ಈಗ ಅದಕ್ಕೆ ಸಂದರ್ಭ ಒದಗಿದ್ದು ಅವರಿಗೆ ತುಂಬಾ ಆನಂದವಾಯಿತು. ಅವರಿಬ್ಬರೂ ಆ ಕೆಲಸವನ್ನು

ಸಂತೋಷದಿಂದ ಒಪ್ಪಿಕೊಂಡರು. "ನೀವು ನನ್ನ ಜತೆಗೆ ಬಂದರೆ ನಿಮಗೆ ಬೇರೆಲ್ಲಿಯಾದರೂ ಕೆಲಸ ಸಿಗಬಹುದು. ನಾವಿಕರಾದ ನಿಮಗೆ ಎಮೆಜಾನ ನದಿಯಲ್ಲಿ ದೋಣಿ ನಡೆಸುವ ಕೆಲಸ ಸುಲಭದಲ್ಲಿ ದೊರಕ ಬಹುದು. ರೆಡ್ ಇಂಡಿಯನರೇ ದೋಣಿ ನಡೆಸುವ ಕೆಲಸ ಮಾಡುತ್ತಾರೆ. ನೀವೂ ಅವರಂತೆ ದೋಣಿಯ ಹುಟ್ಟು ಹಾಕಬಲ್ಲಿರಾದರೆ ಕೆಲಸ ದೊರಕಲು ಏನೂ ಕಷ್ಟವಾಗದು." ಎಂದು ಪಾದ್ರಿ ಹೇಳಿದನು.

ಪಾದ್ರಿ ಹೇಳಿದಂತೆ ಏಳೆಂಟು ದಿನಗಳು ಕಳೆದೊಡನೆಯೇ ಆ ಮೂವರೂ ಆ ಕಾಡಿನ ಮನೆಯಿಂದ ಹೊರಟರು. ಅಲ್ಲಿಂದ ಸುಮಾರು ಇಪ್ಪತ್ತು ಮೈಲು ದೂರದಲ್ಲಿ ಒಂದು ಪೇಟೆಯಿತ್ತು. ಆ ಪೇಟೆಗೆ ಹೋಗಿ, ಪಾದ್ರಿ ತನಗೆ ಬೇಕಾದ ಸಾಮಾನುಗಳನ್ನು ತೆಗೆದುಕೊಂಡು ಹೇಸರ ಕತ್ತೆಗಳ ಮೇಲೆ ಹೇರಿ ಅಲ್ಲಿಂದ ಮುಂದುವರಿದನು.

ಮಾರ್ಟಿನನೂ ಬಾರ್ನಿಯೂ ಪಾದ್ರಿಯನ್ನೇ ಅನುಸರಿಸಿದರು. ಅವರು ಸಮುದ್ರ ತೀರದ ಸಮತಟ್ಟಾದ ಪ್ರದೇಶವನ್ನು ದಾಟಿ, ಬೆಟ್ಟದ ಸಾಲುಗಳನ್ನು ಏರಿದರು. ಆ ಎತ್ತರವಾದ ಬೆಟ್ಟದ ಸಾಲು ಬ್ರೇಜಿಲ್ ದೇಶವನ್ನು ಎರಡಾಗಿ ವಿಭಾಗಿಸಿದೆ. ಆ ಬೆಟ್ಟಗಳ ನೂರಾರು ಸಣ್ಣ ದೊಡ್ಡ ನದಿಗಳು ಹುಟ್ಟಿ ಎಮೆಜಾನ್ ನದಿಯ ಹೊಟ್ಟೆ ತುಂಬಿಸುತ್ತದೆ. ಕೆಲವು ದಿನಗಳ ಪ್ರಯಾಣ ಮಾಡಿ ಬೆಟ್ಟದ ಸಾಲನ್ನು ಒಂದು ಬದಿಯಿಂದ ಏರಿ ಇನ್ನೊಂದು ಬದಿಯಿಂದ ಇಳಿದು ಬಯಲು ಪ್ರದೇಶಕ್ಕೆ ತಲಪಿದರು.

ಆ ಬಯಲು ಪ್ರದೇಶದಲ್ಲಿ ಅಮೇರಿಕದ ಮೂಲನಿವಾಸಿಗಳಾದ ರೆಡ್ ಇಂಡಿಯನರ ಹಳ್ಳಿಗಳು ಇದ್ದುವು. ಪಾದ್ರಿಯೂ, ಮಾರ್ಟಿನನೂ, ಬಾರ್ನಿಯೂ ಒಂದು ದಿನ ಸಂಜೆ ರೆಡ್ ಇಂಡಿಯನರ ಒಂದು ಹಳ್ಳಿಗೆ ಹೋದರು. ಆ ಹಳ್ಳಿಯಲ್ಲಿ ಅವರು ಆ ದಿನ ಒಂದು ಹಬ್ಬವನ್ನು ಆಚರಿಸುತ್ತಿದ್ದರು. ಹುಡುಗಿಯರು

ಸೊಗಸಾದ ಉಡುಗೆ ತೊಡುಗೆಗಳನ್ನು ತೊಟ್ಟಿದ್ದರು. ಅವರ ಕಪ್ಪು ಜಡೆಗಳೂ, ಬಿಳಿ ನಿಲುವಂಗಿಗಳೂ ಬಹಳ ಸೊಗಸಾಗಿ ತೋರುತ್ತಿದ್ದುವು. ಅವುಗಳು ನಕ್ಷತ್ರಗಳಂತೆ ಮಿನುಗುತಿದ್ದುವು. ನಕ್ಷತ್ರಗಳಂತೆ ಪಳಪಳನೆ ಹೊಳೆಯುವುದು ರತ್ನಗಳು ಅಲ್ಲವೆಂದೂ, ಮಿಂಚು ಹುಳುಗಳೆಂದೂ ಪಾದ್ರಿ ತನ್ನ ಗೆಳೆಯರಿಗೆ ಹೇಳಿದನು. ತಮ್ಮ ಉಡುಪು, ಕೂದಲು ಎಲ್ಲ ನಕ್ಷತ್ರಗಳಂತೆ ಮಿನುಗಿ ಸೊಗಸು ಕಾಣಲೆಂದು ಅವರು ನಿಜವಾಗಿ ಮಿಂಚುಹುಳಗಳನ್ನು ಹಿಡಿದು, ಆಕರ್ಷಣೀಯವಾಗಿ ತಮ್ಮ ಉಡುಪುಗಳಿಗೆ ಹೊಲಿಯುತ್ತಿದ್ದರು. ಆ ಪಾದ್ರಿಯೂ ಅವನ ಗೆಳೆಯರೂ ಎಷ್ಟೋ ಹೊತ್ತಿನ ವರೆಗೆ ಆ ರೆಡ್ ಇಂಡಿಯನರ ನರ್ತನವನ್ನು ನೋಡಿ ಸಂತೋಷಪಟ್ಟರು. ಮತ್ತೆ ಅಲ್ಲಿಂದ ಹೊರಟು ತಾವು ವಿಶ್ರಾಂತಿಗಾಗಿ ಆರಿಸಿದ್ದ ಮರ ಗಳ ತೋಪಿನೆಡೆಗೆ ನಡೆದರು.

ಆ ಮೂವರು ಹಾಗೆ ಮುಂದುವರಿದು ವಿಶ್ರಮಿಸಲು ತೊಡಗಿದಾಗ ಕಿವಿ ಕೊರೈಸುವಂತಹ ಒಂದು ಕೂಗು ಕೇಳಿಸಿತು. ಆ ಕೂಗು ಹೆಂಗಸೊಬ್ಬಳ ಕೂಗಾಗಿತ್ತು. ಆ ಕೂಗಿನೊಂದಿಗೆ ಯಾರೋ ಜಗಳಾಡುತ್ತಿದ್ದ ಸದ್ದೂ ಕೇಳಿಸಿತು. ಬಾರ್ನಿ ಆ ಸದ್ದು ಕೇಳಿದಲ್ಲಿಗೆ ಧಾವಿಸಿದನು. ಅವನು ಜಗಳಾಡುತ್ತಿದ್ದೆಡೆ ಯನ್ನು ಮುಟ್ಟಿದಾಗ ಹೆಂಗಸೊಬ್ಬಳು ಓಡಿ ಹೋಗುವುದೂ, ರೆಡ್ ಇಂಡಿಯನ್ ಗಂಡಸರಿಬ್ಬರು ಜಗಳಾಡುತ್ತಿರುವುದೂ ಕಾಣಿಸಿತು.

ಇಬ್ಬರು ಗಂಡಸರಲ್ಲಿ ಒಬ್ಬನು ಇನ್ನೊಬ್ಬನನ್ನು ಮಗುಚಿ ಹಾಕಿ ಗಹಗಹಿಸಿ ನಗುತ್ತ ಪಳಪಳನೆ ಹೊಳೆಯುತ್ತಿದ್ದ ಕತ್ತಿಯನ್ನು ತೆಗೆದನು. ಬಾರ್ನಿ ಅತ್ತಿತ್ತ ನೋಡದೆ ಆ ಕತ್ತಿ ಹಿಡಿದಿದ್ದ ಮನುಷ್ಯನ ಬಳಿಗೋಡಿ, ಅವನ ಮುಂಗೈಯನ್ನು ಬಲವಾಗಿ ಹಿಡಿದು ಆಚೆಗೆ ಎಳೆದು ಹಾಕಿದನು. ಮೊದಲು ಬಿದ್ದಿದ್ದ ಮನುಷ್ಯನು ಈ ಎಡೆಯಲ್ಲಿ ಬಿದ್ದಲ್ಲಿಂದ ಎದ್ದು ಕಾಲಿಗೆ ಬುದ್ಧಿ

ಹೇಳಿದನು. ಅಷ್ಟರಲ್ಲಿ ಬಾರ್ನಿ ಹಿಡಿದು ನೂಕಿದ್ದ ಮನುಷ್ಯನು ಸಿಟ್ಟಿನಿಂದ ಕಿಡಿಕಿಡಿಯಾಗಿ, ಓಡಿ ಬಂದು ಬಾರ್ನಿಯ ಕುತ್ತಿಗೆಯನ್ನು ಬಲವಾಗಿ ಹಿಡಿದುಕೊಂಡನು. ಬಾರ್ನಿ ಇದಕ್ಕೆ ಹೆದರುವನೆ! ಅವನು ವೈರಿಯ ಮುಖಕ್ಕೆ ಒಂದೇಟು ಬಿಟ್ಟು ನೆಲಕ್ಕೆ ಉರುಳಿಸಿದನು. ಅಷ್ಟರಲ್ಲಿ ಹತ್ತಾರು ಮಂದಿ ರೆಡ್ ಇಂಡಿಯನರು ಬಂದು ಬಾರ್ನಿಯನ್ನು ಮುತ್ತಿಕೊಂಡರು. ಪಾದ್ರಿಯೂ ಮಾರ್ಟಿನನೂ ಗಲಾಟೆಯ ಸದ್ದು ಕೇಳಿ ಅಲ್ಲಿಗೆ ಓಡಿ ಬಂದರು. "ಏನಿದು? ಏನಿದು?" ಎನ್ನುತ್ತ ಒಂದು ಬೆತ್ತ ಹಿಡಿದುಕೊಂಡು ಆ ರೆಡ್ ಇಂಡಿಯನರ ಎಡೆಯಲ್ಲಿ ನುಗ್ಗಿದರು. ಪಾದ್ರಿಯನ್ನು ಕಂಡೊಡನೆ ಅಲ್ಲಿದ್ದವರಲ್ಲಿ ಮೂವರು ಪಾದ್ರಿಯ ಕಾಲಿಗೆ ಅಡ್ಡ ಬಿದ್ದರು. ಉಳಿದವರು ಮೌನವಾಗಿ ಹಿಂದೆ ಸರಿದರು. ಪಾದ್ರಿ ರೆಡ್ ಇಂಡಿಯನರ ಭಾಷೆಯಲ್ಲಿ ಏನೋ ಹೇಳಿ, ಆ ಮೂವರನ್ನು ಕಳುಹಿಸಿಕೊಟ್ಟು, ಬಾರ್ನಿಯೊಂದಿಗೆ ತಾವು ಬೀಡುಬಿಟ್ಟಲ್ಲಿಗೆ ಬಂದನು. ಬೆಳದಿಂಗಳ ಆ ರಾತ್ರಿ ರೆಡ್ ಇಂಡಿಯನರ ಎಷ್ಟೋ ಕತೆಗಳನ್ನು ಪಾದ್ರಿ ಮಾರ್ಟಿನ್, ಬಾರ್ನಿಯರಿಗೆ ಹೇಳಿದನು.

ಪಾದ್ರಿ, ಬಾರ್ನಿ ಮತ್ತು ಮಾರ್ಟಿನ್ ಹಲವು ದಿನಗಳವರೆಗೆ ಪ್ರಯಾಣ ಮಾಡಿ ಹಲವು ಹಳ್ಳಿಗಳನ್ನೂ ಪೇಟೆಗಳನ್ನೂ ನೋಡಿಕೊಂಡು, ಕಡೆಗೆ ಎಮೆಜಾನ್ ನದಿಯ ಒಂದು ಉಪನದಿಯ ತೀರದಲ್ಲಿರುವ ಒಂದು ಪಟ್ಟಣಕ್ಕೆ ಬಂದರು. ಆ ಪಟ್ಟಣದಲ್ಲಿ ಪಾದ್ರಿಯ ಗೆಳೆಯನಾದ ಒಬ್ಬ ಮುದಿ ವ್ಯಾಪಾರಿ ಇದ್ದನು. ಅವನ ದೋಣಿ ನಡೆಸುತ್ತಿದ್ದ ಇಂಡಿಯನರು ಹೇಳದೆ ಕೇಳದೆ ಓಡಿ ಹೋಗಿದ್ದರು. ಆ ಮುದಿ ವ್ಯಾಪಾರಿ ಮಾರ್ಟಿನನಿಗೂ, ಬಾರ್ನಿಗೂ ದೋಣಿ ನಡೆಸುವ ಕೆಲಸ ಕೊಟ್ಟು, ಆ ಕೆಲಸಕ್ಕಾಗಿ ತುಸು ಸಂಬಳ ಕೊಡುವೆನೆಂದೂ ಹೇಳಿದನು. ಮಾರ್ಟಿನನಿಗೂ, ಬಾರ್ನಿಗೂ ಪಾದ್ರಿಯ ಜತೆಕಡಿಯಲು ಮನಸ್ಸಿಲ್ಲದಿದ್ದರೂ ಉಪಾಯವಿಲ್ಲದೆ ವ್ಯಾಪಾರಿಯ ಬಳಿ ಕೆಲಸಕ್ಕೆ ಸೇರಿದರು.

ಪಾದ್ರಿಯೂ ತನ್ನ ಗೆಳೆಯರನ್ನು ಬಿಟ್ಟು ಹೋಗಲು ಮನಸ್ಸಿಲ್ಲ ದಿದ್ದರೂ ತನ್ನ ಕೆಲಸಕ್ಕೆ ಹೋಗಲೇ ಬೇಕಾದುದರಿಂದ, ತಾನು ಹೋಗುವಾಗ ಮಾರ್ಟಿನನಿಗೆ ಒಂದು ಸಣ್ಣ ಕಪಿಯನ್ನೂ, ಬಾರ್ನಿಗೆ ಒಂದು ನಾಯನ್ನೂ ಇನಾಮು ಕೊಟ್ಟು, ಹೋಗಿ ಬರುವೆನೆಂದು ಹೇಳಿ ಹೊರಟು ಹೋದನು.

ಆ ವ್ಯಾಪಾರಿಗೆ ಪೋರ್ತುಗೀಸ್ ಭಾಷೆಯಲ್ಲದೆ ಇತರ ಭಾಷೆ ಚೆನ್ನಾಗಿ ಗೊತ್ತಿರಲಿಲ್ಲ. ತುಸು ಮಟ್ಟಿಗೆ ಹರುಕು ಮುರುಕು ಇಂಗ್ಲಿಷ್ ಬರುತ್ತಿತ್ತು. ವ್ಯಾಪಾರಿಗೆ ಇಂಗ್ಲಿಷ್ ಭಾಷೆ ಗೊತ್ತಿದ್ದಷ್ಟು, ಪೋರ್ತುಗೀಸ್ ಭಾಷೆ ಬಾರ್ನಿಗೂ ತಿಳಿದಿತ್ತು. ಪಾದ್ರಿಯ ಜತೆಯಲ್ಲಿದ್ದಷ್ಟು ಕಾಲದಲ್ಲಿ ಮಾರ್ಟಿನನೂ ಪೋರ್ತುಗೀಸ್ ಭಾಷೆಯ ಕೆಲವು ಶಬ್ದಗಳನ್ನು ಕಲಿತುಕೊಂಡಿದ್ದನು. ಈ ಹರಕು ಮುರುಕು ಭಾಷೆಗಳಿಂದಲೂ, ಕೈ ಕರಣಗಳಿಂದಲೂ ಅವರು ತಮ್ಮ ಅಭಿಪ್ರಾಯಗಳನ್ನು ಒಬ್ಬರು ಇನ್ನೊಬ್ಬರಿಗೆ ತಿಳಿಸಿಕೊಳ್ಳುತ್ತಿದ್ದರು.

ಬಾರ್ನಿಯೂ, ಮಾರ್ಟಿನನೂ ಮುದಿ ವ್ಯಾಪಾರಿಯ ಬಳಿ ನಾವಿಕರಾಗಿ ನಿಂತು, ಅವನು ಹೇಳಿದಲ್ಲಿಗೆ ದೋಣಿ ನಡೆಸತೊಡಗಿದರು. ದೋಣಿ ಹೊಳೆಯ ಬದಿಯಲ್ಲಿರುವ ಬೇರೆ ಬೇರೆ ಹಳ್ಳಿಗಳಿಗೆ ಹೋಗಬೇಕಿತ್ತು. ಹೊಳೆಯು ನಿಧಾನವಾಗಿ ಹರಿಯುತ್ತಿದ್ದಲ್ಲಿ ಅವರು ದೋಣಿ ನಡೆಸಲು ತುಸು ಕಷ್ಟಪಡಬೇಕಿತ್ತು. ರಭಸದಿಂದ ಹರಿಯುತ್ತಿದ್ದಲ್ಲಿ ದೋಣಿ ಸರಿಯಾದ ದಾರಿಯಲ್ಲಿ ಹೋಗುತ್ತದೋ ಎಂದು ನೋಡಿಕೊಂಡರೆ ಸಾಕಾಗಿತ್ತು. ಕೆಲವು ವೇಳೆ ದೋಣಿ ಹೊಯಿಗೆ ದಿಡ್ಡಿಗೆ ತಾಗಿ ಅಲ್ಲೇ ನಿಂತು ಬಿಡುತ್ತಿತ್ತು. ಆಗ ಕೆಳಗಿಳಿದು ಅದನ್ನು ಈಚೆಗೆ ಎಳೆಯ ಬೇಕಾಗುತ್ತಿತ್ತು. ಅವರ ದೋಣಿ ಹೋಗುವ ಆ ಹೊಳೆಯ ದಡಗಳಲ್ಲಿ ಮೂಲ ನಿವಾಸಿಗಳ ಎಷ್ಟೋ ಹಳ್ಳಿಗಳೂ, ಅವರ ತೋಟಗಳೂ ಕಾಣ ಸಿಗುತ್ತಿದ್ದುವು.

ಒಮ್ಮೆ ಬಾರ್ನಿಯೂ, ಮಾರ್ಟಿನನೂ ತಮ್ಮ ಯಜಮಾನ

ನೊಂದಿಗೆ ದೋಣಿಯಲ್ಲಿ ಕುಳಿತು ದೂರದ ಪ್ರಯಾಣಕ್ಕೆ ಹೊರ ಟರು. ಅವರ ದೋಣಿ ಎಮೆಜಾನ್ ಮಹಾ ನದಿಯನ್ನು ಸೇರಿತು. ಎಮೆಜಾನ್ ನದಿಯಲ್ಲಿ ದೋಣಿ ಹೋಗುತ್ತಿದ್ದಾಗ ಬಾರ್ನಿಯ ದೃಷ್ಟಿ ನದಿಯ ದಡದಲ್ಲಿದ್ದ ಹೊಯಿಗೆ ದಿಣ್ಣೆನ ಮೇಲೆ ಬಿದ್ದು ಕೊಂಡಿದ್ದ ಯಾವುದೋ ಒಂದು ವಸ್ತುವಿನ ಮೇಲೆ ಬಿತ್ತು. ಅವನು ಹುಬ್ಬುಗಳನ್ನೆತ್ತಿ, ಹುಬ್ಬುಗಳ ಮೇಲೆ ಕೈಯಿಟ್ಟು ದಿಟ್ಟಿಸಿ ನೋಡತೊಡಗಿದನು. ಅದೊಂದು ದೊಡ್ಡ ಹಾವು! ಬಾರ್ನಿ ಅದನ್ನು ನೋಡುತ್ತಿದ್ದಂತೆಯೇ ಹೆದರಿ ಕೂಗಿ ಬಿಟ್ಟನು. ಆ ಹಾವು ಹದಿನಾರು ಅಡಿಗಳಷ್ಟು ಉದ್ದ ಇತ್ತು! ಅದರ ಶರೀರ ಮನುಷ್ಯನ ಶರೀರದಷ್ಟು ತೋರವಾಗಿತ್ತು. ಅದರ ತಲೆಯ ಭಾಗ, ಕುತ್ತಿಗೆಯಿಂದ ಮೇಲೆ ಅದರ ಶರೀರಕ್ಕಿಂತ ಮೂರು ಪಾಲಷ್ಟು ತೋರವಾಗಿತ್ತು. ಬಾರ್ನಿಯ ಕೂಗಿಗೆ ಮಾರ್ಟಿನನೂ ಆ ಕಡೆ ನೋಡಿದನು, ಮುದಿ ವ್ಯಾಪಾರಿಯೂ ಆ ಕಡೆ ನೋಡಿ ದನು. ಅದು 'ಅನಕೊಂಡ' ಅಲ್ಲವೇ? ಎಂದನು ಮಾರ್ಟಿನ್. "ಹೌದು, ಅನಕೊಂಡ ಹೆಬ್ಬಾವು! ಅದು ಮಾತ್ರ ಸತ್ತು ಹೋಗಿರ ಬೇಕು." ಎಂದನು ವ್ಯಾಪಾರಿ.

"ಏನು, ಹಾವಿನ ಬಾಯಿಂದ ಕೋಡುಗಳು ಹೊರಡುತ್ತಿ ವೆಯೇ, ನೋಡಿ! ಎತ್ತಿನ ಕೋಡುಗಳಂತಹ ಎರಡು ಕೋಡುಗಳು ಅದರ ಬಾಯಿಯಿಂದ ಹೊರಟಿವೆ!" ಎಂದು ಬಾರ್ನಿ ದಿಗಿಲಿ ನಿಂದ ನುಡಿದನು; "ನಾವು ಅದನ್ನು ಹತ್ತಿರದಿಂದ ನೋಡಬೇಕು. ವಿಚಿತ್ರ ಪ್ರಾಣಿಯದು." ಎಂದು ಹೇಳಿದನು. ಬಾರ್ನಿಯ ಮಾತು ಕೇಳಿ ಮುದಿ ವ್ಯಾಪಾರಿಯು ದೋಣಿಯನ್ನು ದಡ ಹೊಂದಿಸಲು ಹೇಳಿದನು.

ದೋಣಿಯನ್ನು ದಡ ಹೊಂದಿಸಿ, ಕೆಳಗಿಳಿದು, ಅವರು ಆ ಹೆಬ್ಬಾವಿನ ಬಳಿಗೆ ಹೋದರು. ಪರೀಕ್ಷಿಸಿ ನೋಡಿದಾಗ ಅದು ಆಗ ತಾನೇ ಒಂದು ಎತ್ತನ್ನು ನುಂಗಿ ಬಿಟ್ಟಿತ್ತು! ಎತ್ತಿನ ಕೋಡುಗಳು

ಅದರ ಬಾಯಿಯಿಂದ ಹೊರಗೆ ಕಾಣಿಸುತ್ತಿದ್ದುವು! ಇದೆಂತಹ ಹೆಬ್ಬಾವು! ಎಂದು ಬಾರ್ನಿ ಉದ್ಗಾರವೆತ್ತಿದನು! "ಇದೆಲ್ಲಿ! ಇದರ ಮೂರು ಪಾಲಿನಷ್ಟು ದೊಡ್ಡ ಹೆಬ್ಬಾವುಗಳಿವೆ. ಸಾಕು, ನಾವು ದೋಣಿ ಹತ್ತುವ" ಎಂದು ಮುದಿ ವ್ಯಾಪಾರಿ ದೋಣಿ ಏರಿದ. ಮಾರ್ಟಿನನೂ ಅವನನ್ನೇ ಅನುಸರಿಸಿದ. ಬಾರ್ನಿ ತಿರುಗಿ ತಿರುಗಿ ಆ ಹಾವನ್ನೇ ನೋಡುತ್ತ ದೋಣಿಯ ಕಡೆಗೆ ಬರುತ್ತಿದ್ದಾಗ ಸಮೀಪದಲ್ಲಿ ಬೆಳೆವ ಪೊದೆ ಹಂದಾಡಿದಂತಾಯಿತು. ಅದೇನೆಂದು ಅವನು ನೋಡುತ್ತಿದ್ದಂತೆಯೇ ಕೆಂಡದಂತೆ ಮಿನುಗುತ್ತಿದ್ದ ಕಣ್ಣುಗಳು ಕಾಣಿಸಿಕೊಂಡುವು! ಅದೊಂದು ಹೆಬ್ಬಾವು! ಬಾರ್ನಿಯ ಮೇಲೆ ನೆಗೆಯಲು ಸಿದ್ಧವಾಗಿತ್ತು! ಬಾರ್ನಿ ಆಕ್ಷಣ ದೋಣಿಗೆ ಹಾರಿ ಬಿಟ್ಟನು. ಅವನು ಹಾರಿದ ರಭಸಕ್ಕೆ ಒಮ್ಮೆ ದೋಣಿ ಅಡಿ ಮೇಲು ಆದಂತೆ ಆಯಿತು. ಆದರೆ ಅದರಿಂದ ಒಂದು ಉಪಕಾರವಾಯಿತು. ಬಾರ್ನಿ ಹಾರಿದ ರಭಸಕ್ಕೆ ದೋಣಿ ಒಮ್ಮೆ ಅಡಿಮೇಲಾದಂತೆ ಆದರೂ, ಮುಂದಕ್ಕೆ ದೂಡಿದಂತಾಗಿ ಅದು ಹೊಳೆಯ ಮಧ್ಯವನ್ನು ಸೇರಿತು. ಹೆಬ್ಬಾವಿನ ಬಾಯಿಯಿಂದ ಪಾರಾಯಿತು. ನಡು ಹೊಳೆಯಿಂದ ಅವರು ಹಿಂತಿರುಗಿ ನೋಡಿದಾಗ ಆ ಹಾವು ಬುಸುಗುಟ್ಟುತ್ತಾ ಸಿಟ್ಟಿನಿಂದ ಇದ್ದದ್ದು ಕಾಣಿಸಿತು! ದೋಣಿ ಮುಂದುವರಿಯಿತು.

ದೋಣಿ ನಾಲ್ಕು ಮೈಲು ಮುಂದೆ ಹೋದಾಗ ಹೊಳೆಯ ದಂಡೆಯಲ್ಲಿ ವಿಸ್ತಾರವಾಗಿ ಹೊಯಿಗೆ ಹರಡಿತ್ತು. "ನಿಮಗೆ ಆವೆಗಳ ಮೊಟ್ಟೆ ಬೇಕಾದರೆ ಇಲ್ಲಿ ಸಿಗುತ್ತವೆ. ದೋಣಿಯನ್ನು ದಡಕ್ಕೆ ಸೇರಿಸಿರಿ" ಎಂದು ಮುದಿ ವ್ಯಾಪಾರಿ ಹೇಳಿದನು. ವ್ಯಾಪಾರಿಯ ಮಾತಿನಂತೆ ದೋಣಿ ದಡ ಸೇರಿತು. ಬಾರ್ನಿಯೂ ಮಾರ್ಟಿನನೂ ಹೊಯಿಗೆಯಲ್ಲಿ ಮೊಟ್ಟೆಗಳನ್ನು ಕಾಣದೆ ಆಚೆ ಈಚೆ ನೋಡ ತೊಡಗಿದರು. "ಆವೆಯ ಮೊಟ್ಟೆಗಳು ದಂಡೆಯ ಮೇಲೆ ಇರುವುದಿಲ್ಲ. ಆವೆಗಳು ಹೊಯಿಗೆಯಲ್ಲಿ ಹೊಂಡ ತೋಡಿ

ಆದರಲ್ಲಿ ಮೊಟ್ಟೆಗಳನ್ನಿಟ್ಟು, ಹೊಯಿಗೆ ಮುಚ್ಚಿ ಬಿಡುತ್ತವೆ." ಎಂದು ಹೇಳಿ ಮುದಿ ವ್ಯಾಪಾರಿ ಹೊಯಿಗೆಯಲ್ಲಿ ಹೊಂಡ ತೋಡಿ ಮೊಟ್ಟೆಗಳನ್ನು ಹೆಕ್ಕತೊಡಗಿದನು. "ಈ ಮೊಟ್ಟೆಗಳೆಂದರೆ ಮೂಲ ನಿವಾಸಿಗಳಿಗೆ ಬಹು ಇಷ್ಟ. ಇವುಗಳಿಂದ ಒಂದು ಬಗೆಯ ಎಣ್ಣೆಯೂ ದೊರಕುತ್ತದೆ. ಅದನ್ನು ದೀಪಕ್ಕೂ ಪದಾರ್ಥಗಳಿಗೂ ಉಪಯೋಗಿಸುತ್ತಾರೆ." ಎನ್ನುತ್ತಾ ಮುದುಕನು ತನ್ನ ಬಿಲ್ಲು ಬಾಣಗಳನ್ನು ತೆಗೆದುಕೊಂಡು ನೀರಲ್ಲಿದ್ದ ಒಂದು ದೊಡ್ಡ ಆವೆಯನ್ನೇ ಗುರಿಯಿಟ್ಟು ಬಾಣ ಹೊಡೆದು ಕೊಂದು ಈಚೆಗೆ ತಂದನು. ಆಗಲೇ ಮಾರ್ಟಿನನೂ ಬಾರ್ನಿಯೂ ಒಣ ಕಸ ಕಡ್ಡಿ ಕೂಡಿಸಿ ಬೆಂಕಿ ಉರಿಸಿದ್ದರು. ಅವರು ಆವೆಯ ಮಾಂಸವನ್ನೂ ಮೊಟ್ಟೆಗಳನ್ನೂ ಬೇಯಿಸಿ ಹೊಟ್ಟೆ ತುಂಬಾ ತಿಂದರು. ಬಾರ್ನಿ, ಮಾರ್ಟಿನರಿಗಂತೂ ಅದೊಂದು ಹಬ್ಬದೂಟದಂತಾಯಿತು!

ಆ ಮುದಿ ವ್ಯಾಪಾರಿ ಎಮೆಜಾನ್ ನದಿಯ ತೀರದಲ್ಲಿದ್ದ ಹಳ್ಳಿಗಳಲ್ಲಿ ಅಲ್ಲಲ್ಲಿ ತಂಗಿ, ಹಳ್ಳಿಗರಿಗೆ ಬೇಕಾದ ಸಾಮಾನುಗಳನ್ನು ಕೊಟ್ಟು, ಅವರಲ್ಲಿದ್ದ ಸಾಮಾನುಗಳನ್ನು ಕೊಂಡುಕೊಳ್ಳುತ್ತಿದ್ದನು. ಹೀಗೆ ಕೆಲವು ದಿನಗಳ ವರೆಗೆ ಅವರು ಆ ನದಿಯಲ್ಲೇ ಮುಂದುವರಿದರು. ಆ ನದೀತೀರದ ಹಳ್ಳಿಯಲ್ಲಿದ್ದವರಲ್ಲಿ ಅನೇಕರು ಬ್ರೆಜಿಲ್ ದೇಶದವರು ಎಂದರೆ, ಪೋರ್ತುಗೀಸರು ಮತ್ತು ಮೂಲ ನಿವಾಸಿಗಳಿಗೆ ಹುಟ್ಟಿದವರಾಗಿದ್ದರು. ಇನ್ನು ಕೆಲವರು ಶುದ್ಧ ಪೋರ್ತುಗೀಸರೂ ಇದ್ದರು. ಇಂಗ್ಲಿಷರೂ, ಉತ್ತರ ಅಮೇರಿಕದವರೂ ಬಹು ಅಲ್ಪ ಮಂದಿ ಇದ್ದರು. ಆದರೂ ಬ್ರೆಜಿಲಿನ ಹುಡುಗಿಯರನ್ನೇ ಮದುವೆಯಾಗಿ ಅಲ್ಲೇ ಸಂಸಾರ ಹೂಡಿದ್ದರು. ಆ ಜನರು ಆ ಮುದುಕ ವ್ಯಾಪಾರಿ ಹೋದಲ್ಲೆಲ್ಲಾ ಬಹಳ ಪ್ರೀತಿಯಿಂದ ವಿಶ್ವಾಸದಿಂದ ಕಾಣುತ್ತಿದ್ದರು.

## ಹನ್ನೆರಡು

ಬಾರ್ನಿ, ಮಾರ್ಟಿನರ ದೋಣಿ ಒಮ್ಮೆ ಒಂದು ಹಳ್ಳಿಯಲ್ಲಿ ಕೆಲವು ದಿನಗಳ ವರೆಗೆ ನಿಲ್ಲಬೇಕಾಯಿತು. ಅವರೆಲ್ಲ ಆ ಹಳ್ಳಿಯ ತೋಟಗಾರನಾದ ಅಂತೋನಿ ಎಂಬವನ ಮನೆಯಲ್ಲಿ ಉಳಕೊಂಡರು. ಅಂತೋನಿ ಪ್ರಾಯದಲ್ಲಿ ಮುದುಕನು; ಉಣಲಿಕ್ಕೆ, ಉಡಲಿಕ್ಕೆ ಬೇಕಾದಷ್ಟು ಇದ್ದವನು. ಅಲ್ಲದೆ ನೆಗಳೆಗಳ ಚರ್ಮದ ಮತ್ತು ಕೊಬ್ಬಿನ ವ್ಯಾಪಾರ ಅವನಿಗಿತ್ತು. ಅವನ ಮನೆಯಿಂದ ಏಳೆಂಟು ಮೈಲು ದೂರದಲ್ಲಿ ಒಂದು ದೊಡ್ಡ ಪಳ್ಳವಿತ್ತು. ಆ ಪಳ್ಳದಲ್ಲಿ ತುಂಬ ನೆಗಳೆಗಳಿದ್ದುವು. ಈ ವ್ಯಾಪಾರಿಯೂ ಮಾರ್ಟಿನನೂ ಹೋದ ಸಮಯದಲ್ಲಿಯೇ ಅಂತೋನಿ ನೆಗಳೆಗಳ ಬೇಟೆಗೆ ಹೋಗಲು ತಯಾರು ಮಾಡುತ್ತಿದ್ದನು. ಬಾರ್ನಿಯೂ, ಮಾರ್ಟಿನನೂ ತಾವೂ ನೆಗಳೆಗಳ ಬೇಟೆಗೆ ಹೊರಡುತ್ತೇವೆಂದರು. ಅಂತೋನಿ ಆಗಬಹುದೆಂದು ಒಪ್ಪಿಕೊಂಡನು.

ಒಂದು ದಿನ ಅಂತೋನಿ ತನ್ನ ಒಬ್ಬ ನೀಗ್ರೋ ಗುಲಾಮನೊಂದಿಗೆ ಬಾರ್ನಿ, ಮಾರ್ಟಿನರನ್ನು ನೆಗಳೆಗಳ ಪಳ್ಳಯಿರುವಲ್ಲಿಗೆ ಕಳುಹಿಸಿದನು. ತಾನು ಹಿಂದಿನಿಂದ ಬರುವೆನೆಂದು ಹೇಳಿದನು. ಎರಡು ಗಂಟೆಗಳ ದಾರಿ ನಡೆದು ಬಾರ್ನಿ, ಮಾರ್ಟಿನರು ನೆಗಳೆಗಳಿರುವ ಪಳ್ಳವಿರುವಲ್ಲಿಗೆ ತಲಪಿದರು. ಅವರು ಅಲ್ಲಿಗೆ ಹೋಗುವಾಗ ಹಲವಾರು ನೀಗ್ರೋ ಗುಲಾಮರು ನೆಗಳೆಗಳ ಬೇಟೆಯ ಸಿದ್ಧತೆಯಲ್ಲಿದ್ದರು. ಇವರನ್ನು ಕಂಡ ಅವರು ಒಮ್ಮೆ ಇವರ ಕಡೆ ನೋಡಿ ತಮ್ಮ ಕೆಲಸಗಳಲ್ಲಿ ತೊಡಗಿದರು. ಆ ದೊಡ್ಡ ಪಳ್ಳದಲ್ಲಿದ್ದ ಕೆಸರು ನೀರಿಗಿಂತಲೂ ಹೆಚ್ಚಾಗಿದ್ದ ಆ ಸಣ್ಣ ದೊಡ್ಡ ನೆಗಳೆಗಳನ್ನು ಕಂಡು ಅವರಿಬ್ಬರೂ ಆಶ್ಚರ್ಯದಿಂದ ಮೂಗಿನ ಮೇಲೆ ಬೆರಳಿಟ್ಟರು! ಅವರು ಪಳ್ಳದ ಸುತ್ತು ಸುತ್ತು ಬಂದು ನೆಗಳೆಗಳನ್ನು ನೋಡುತ್ತ ಅವುಗಳ ವಿಷಯವಾಗಿ ಅಲ್ಲಿದ್ದ ನೀಗ್ರೋ

ಗಳೊಡನೆ ವಿಚಾರಿಸುತ್ತ ಇದ್ದಾಗ ಅಂತೋನಿಯೂ ಅಲ್ಲಿಗೆ ಬಂದನು. ಆಗ ಕತ್ತಲಾಗುತ್ತ ಬಂದುದರಿಂದ, "ಇಂದು ಬೇಟೆ ಬೇಡ. ನಾಳೆ ಸುರು ಮಾಡುವ" ಎಂದು ಅಂತೋನಿಯು ನುಡಿದನು. ನೀಗ್ರೋಗಳು ಆಗಲೇ ಬೆಂಕಿ ಉರಿಸಿದ್ದರು; ಊಟ ತಯಾರಿಸಿದ್ದರು; ಅಂತೋನಿಗೂ ಬಾರ್ನಿ, ಮಾರ್ಟಿನರಿಗೂ ಮಲಗಿಕೊಳ್ಳಲಿಕ್ಕಾಗಿ ಅಲ್ಲೇ ಇದ್ದ ಹಳೆ ಗುಡಿಸಲಲ್ಲಿ ಮಲಗುವ ಉಯ್ಯಾಲೆಗಳನ್ನು ಕಟ್ಟಿದ್ದರು. ಅವರು ಮೂವರೂ ಸಂಜೆಯ ಊಟ ಮುಗಿಸಿ ಮಲಗಲು ಹೋದರು. ನೀಗ್ರೋಗಳು ಮಾತ್ರ ಸುಮಾರು ರಾತ್ರಿಯ ವರೆಗೆ ಬೆಂಕಿಯ ಸುತ್ತು ಕುಳಿತು ಡೋಲು ಬಡಿಯುತ್ತಾ ಹಾಡುತ್ತಾ ಇದ್ದರು.

ಮರುದಿನ ಬೆಳಗ್ಗೆ ನಸುಕಿಗೇ ಎಲ್ಲರೂ ಎದ್ದರು. ಬೇಗ ಬೇಗನೆ ಊಟವನ್ನು ಮುಗಿಸಿದರು. ನೀಗ್ರೋಗಳು ಬೇಟೆಗೆ ಸಿದ್ಧರಾದರು. ಕೆಲವರು ಉದ್ದದ ಬಿದಿರುಗಳನ್ನು ಹಿಡಿದು ಕೊಂಡಿದ್ದರು. ಕೆಲವರು ಉರುಳು ಹಗ್ಗಗಳನ್ನು ಹಿಡಿದುಕೊಂಡಿದ್ದರು. ಆ ಪಳ್ಳ ಹೆಚ್ಚು ಆಳವಾಗಿರಲಿಲ್ಲವಾದರೂ ನೆಗಳೆಗಳಿಂದ ಅತಿ ಭಯಂಕರವಾಗಿ ತೋರುತ್ತಿತ್ತು. ಬಿದಿರು ಕೋಲು ಹಿಡಿದು ಕೊಂಡಿದ್ದ ನೀಗ್ರೋಗಳು ಕೆಸರು ನೀರಿಗೆ ಇಳಿದು ಕೋಲುಗಳಿಂದ ಕುಟ್ಟಿ ನೆಗಳೆಗಳನ್ನು ಎಬ್ಬಿಸಿ ಪಳ್ಳದಿಂದ ಹೊರಗೆ ಅಟ್ಟ ತೊಡಗಿದರು. ಒಬ್ಬ ನೀಗ್ರೋ ಮೇಲೆ ನಿಂತುಕೊಂಡು, 'ಹಾಗೆ ಮಾಡಿ, ಹೀಗೆ ಮಾಡಿ' ಎಂದು ಅಪ್ಪಣೆ ಕೊಡುತ್ತಿದ್ದನು. ಕೋಲುಗಳಿಂದ ಕುಟ್ಟಿದಾಗ ಸಿಟ್ಟಿಗೆದ್ದು ನೀರಿನಿಂದ ಹೊರಗೆ ಓಡಿಬರುತ್ತಿದ್ದ ನೆಗಳೆಗಳನ್ನು, ಉರುಳು ಹಾಕಿ ಹಿಡಿದುಬಿಡುತ್ತಿದ್ದರು. ಉರುಳು ಹಗ್ಗದ ತುದಿಯನ್ನು ಹಿಡಿದು ತಲೆಯ ಮೇಲೆ ಒಂದು ಸುತ್ತು ಬೀಸಿ, ಗುರಿಯಿಟ್ಟು ಹೊಡೆದಾಗ ಆ ಉರುಳು ನೆಗಳೆಯ ತಲೆಯಲ್ಲಿ ಹೊಕ್ಕು ಕುತ್ತಿಗೆಯನ್ನು ಅಮುಕುತಿತ್ತು, ಉರುಳು ಕಾಯುತ್ತಿತ್ತು. ಆಗಲೇ ಉಳಿದ ನೀಗ್ರೋಗಳು ಆ ನೆಗಳೆಯನ್ನು

ಕೊಂದು ಬಿಡುತ್ತಿದ್ದರು. ಉದ್ದ ಕತ್ತಿಯಿಂದ ಬಾಲದ ಬುಡಕ್ಕೆ ಒಂದೇಟು, ಕುತ್ತಿಗೆಗೆ ಒಂದೇಟು ಬಿದ್ದರೆ ಸಾಕು, ನೆಗಳೆ ಜೀವ ಬಿಡುತ್ತಿತ್ತು. ಅವರು ಹಿಡಿದುಕೊಂಡ ನೆಗಳೆಗಳು ಇಪ್ಪತ್ತು ಇಪ್ಪತ್ತೈದು ಅಡಿಗಳಷ್ಟು ಉದ್ದವಾಗಿದ್ದುವು. ಬಾರ್ನಿಯೂ ಮಾರ್ಟಿನನೂ ಈ ನೆಗಳೆ ಬೇಟೆಯನ್ನು ಕಂಡು ಆಶ್ಚರ್ಯಪಟ್ಟರು.

ನೆಗಳೆ ಬೇಟೆಯುನ್ನು ಕಂಡು, ಉರುಳು ಬೀಸುವ ಕೈ ಚಳಕವನ್ನು ನೋಡಿ ಬಾರ್ನಿಗೆ ಉರುಳು ಬೀಸಬೇಕೆಂದು ಆಸೆ ಹುಟ್ಟಿತು. ಅವನು ತನಗೆ ಉರುಳು ಬೀಸಬೇಕೆಂದು ಆಸೆ ಇದೆಯೆಂದು ಹರಕು ಮುರುಕು ಪೋರ್ತುಗೀಸ್ ಭಾಷೆಯಲ್ಲಿ ಹೇಳಿದಾಗ, ಅಲ್ಲಿದ್ದ ನೀಗ್ರೋಗಳು ಗಹಗಹಿಸಿ ನಕ್ಕರು. ಅಂತೋನಿಯು ಮಾತಿನಂತೆಯೇ ನೀಗ್ರೋ ಒಬ್ಬನು ಉರುಳೊಂದನ್ನು ಬಾರ್ನಿಯ ಕೈಗಿತ್ತನು. "ಬಾರ್ನಿ! ನೋಡು! ತಪ್ಪ ಬೇಡ! ನಿನ್ನ ಕೈ ಚಳಕ ತೋರಿಸಿ ಬಿಡು. ಇಲ್ಲವಾದರೆ ಈ ನೀಗ್ರೋಗಳ ನಗೆಗೀಡಾಗ ಬೇಕಾದೀತು" ಎಂದು ಮಾರ್ಟಿನ್ ಜಾಗ್ರತೆ ಹೇಳಿದನು. "ಅದೆಲ್ಲ ಈಗ ಬೇಡ. ಅಷ್ಟೂ ನನಗೆ ತಿಳಿಯದೊ?" ಎನ್ನುತ್ತಾ ಬಾರ್ನಿ ಮುಂದುವರಿದನು. ಅಂತೋನಿಯೂ ಅವನ ಹಿಂದೆಯೇ ಇದ್ದನು. ನೀಗ್ರೋಗಳು ನೆಗಳೆಗಳನ್ನು ಓಡಿಸತೊಡಗಿದರು. ಬಾರ್ನಿ ಯಾವ ನೆಗಳೆಗೆ ಗುರಿಯಿಡುವುದೆಂದು ತುಸು ಹೊತ್ತು ಯೋಚಿಸಿದನು. ಒಂದೇ ಒಂದು ನೆಗಳೆಯೂ ಸರಿಯಾದ ರೀತಿಯಲ್ಲಿ ಬರುತ್ತಿರಲಿಲ್ಲ. ತುಸು ಹೊತ್ತು ಆಚೆಈಚೆ ನೋಡಿ ಬಾರ್ನಿ ಉರುಳು ಬೀಸಿ ಹೊಡೆದೇ ಬಿಟ್ಟನು. ಉರುಳು ಸಿಕ್ಕಿಕೊಂಡಿತು! ಯಾರ ಕುತ್ತಿಗೆಗೆ! ನೆಗಳೆಯ ಕುತ್ತಿಗೆಗಲ್ಲ! ಹಿಂದೆ ನಿಂತಿದ್ದ ಅಂತೋನಿಯ ಕುತ್ತಿಗೆಗೆ! ಇದನ್ನು ನೋಡಿ ಅಲ್ಲಿದ್ದ ನೀಗ್ರೋಗಳಿಂದ ನಗೆ ತಡೆಯಲಾಗಲಿಲ್ಲ. ಅಂತೋನಿ ಸಿಟ್ಟಿನಿಂದ ಪೋರ್ತುಗೀಸ್ ಭಾಷೆಯಲ್ಲಿ ಏನೇನೋ ಒದರಿದನು. ನೀಗ್ರೋಗಳು ಮೌನ ತಾಳಿದರು. ಬಾರ್ನಿ ನಾಚಿಕೆಯಿಂದ ತಲೆತಗ್ಗಿಸಿ,

"ತಪ್ಪಾಯ್ತು, ಕ್ಷಮಿಸ ಬೇಕು" ಎಂದು ಕ್ಷಮೆ ಕೇಳಿದನು. ಅಂತೋನಿಗೆ ಕುತ್ತಿಗೆಗೆ ಉರುಳು ಸಿಕ್ಕಿ ತುಸು ನೋವಾಗಿತ್ತು. ಅವನು ಗುಡಿಸಲಿಗೆ ಹೋಗಿ ಮಲಗು ಮಂಚದಲ್ಲಿ ಮಲಗಿ ಕೊಂಡನು; ಬಳಿಗೆ ಬಂದ ಬಾರ್ನಿ ಮಾರ್ಟಿನರೊಡನೆ, ತಪ್ಪಿ ನಡೆದ ಕಾರ್ಯಕ್ಕೆ ಚಿಂತಿಸ ಬೇಕಾಗಿಲ್ಲವೆಂದು ಅಂತೋನಿಯೆ ಸಮಾಧಾನ ಹೇಳಿದನು. ಆ ಮೇಲೆ ಅವರಿಬ್ಬರೂ ಪಳ್ಳದ ಬಳಿಗೆ ನಡೆದರು. ಅಂತೋನಿ ಗುಡಿಸಲಲ್ಲೇ ಉಳಿದುಕೊಂಡನು.

ನೀಗ್ರೋಗಳು ನೆಗಳೆಗಳ ಬೇಟೆಯನ್ನು ಮುಂದುವರಿಸಿದರು. ಮಧ್ಯಾಹ್ನದ ವರೆಗೂ ಬೇಟೆ ನಡೆಯಿತು; ಸಾಕಷ್ಟು ನೆಗಳೆಗಳನ್ನು ಕೊಂದಾದ ಮೇಲೆ ನೀಗ್ರೋಗಳು ನೆಗಳೆಗಳ ಚರ್ಮ ಸುಲಿದು ಚರ್ಬಿ ತೆಗೆಯ ತೊಡಗಿದರು. ಅವರು ಸಣ್ಣ ನೆಗಳೆಗಳ ಚರ್ಮ ತೆಗೆದು, ಅದೇ ಹಸಿ ಚರ್ಮದಲ್ಲಿ ನೆಗಳೆಗಳ ಚರ್ಬಿಯನ್ನು ಕಟ್ಟಿ ಕಟ್ಟುತ್ತಿದ್ದರು. ಅದೇ ವೇಳೆಗೆ ಬಾರ್ನಿ ಬೆಂಕಿ ಉರಿಸಿ ನೆಗಳೆ ಮಾಂಸವನ್ನು ಊಟಕ್ಕೆ ಸಿದ್ಧಗೊಳಿಸಿದನು. ಅಂತೋನಿ ಬಾರ್ನಿ ತಯಾರಿಸಿದ ಮಾಂಸ ತಿಂದು ಸಂತೋಷಪಟ್ಟನು. ಅವನು ತನ್ನ ಕುತ್ತಿಗೆಗೆ ಹಗ್ಗವೆಸೆದಿದ್ದ ನೋವನ್ನೂ ಮರೆತನು. ಸಂಜೆಯ ವೇಳೆ ಅವರೆಲ್ಲರೂ ಅಂತೋನಿಯ ಮನೆಗೆ ಹಿಂದಿರುಗಿದರು. ನೆಗಳೆ ಬೇಟೆಯ ಕತೆ ಕೇಳಿ ಮುದಿ ವ್ಯಾಪಾರಿ ಹಾರಿ ಹಾರಿ ನಗಾಡಿದನು.

ಮುದಿ ವ್ಯಾಪಾರಿಯೂ, ಬಾರ್ನಿ ಮಾರ್ಟಿನರೂ ಇನ್ನೂ ಕೆಲವು ದಿನಗಳ ವರೆಗೆ ಅಂತೋನಿಯ ಅತಿಥಿಗಳಾಗಿ ಕಾಲ ಕಳೆದರು. ಅವರು ಅಲ್ಲಿದ್ದಾಗ ಹಲವು ಜಾತಿಯ ಆಕಾರದ ಬಣ್ಣದ ಆಶ್ಚರ್ಯಕರಗಳಾದ, ಮೀನುಗಳನ್ನು ಎಮೆಜಾನ್ ನದಿಯಲ್ಲಿ ನೋಡಿದರು. ದೋಣಿಯ ಸುತ್ತಲೂ ನೆಗೆದಾಡುತ್ತಿದ್ದ ಆ ಮೀನುಗಳನ್ನು ಕೊಲ್ಲಲು ಹೆಚ್ಚು ಕಷ್ಟವೇ ಇರಲಿಲ್ಲ. ದೋಣಿ ನಡೆಸುವ ಹುಟ್ಟಿನಿಂದ ಒಂದೇಟು ಹೊಡೆದರೆ ಹಲವು ಮೀನುಗಳು

ಸತ್ತು ಬೀಳುತ್ತಿದ್ದವು. ಅವರು ನೋಡಿದ ಮೀನುಗಳಲ್ಲಿ ದನ ಮೀನು ಎಂಬುದು ಆಶ್ಚರ್ಯಕರವಾದುದು. ಆ ದನ ಮೀನು ಹೆಚ್ಚು ಕಡಮೆ ಆರು ಅಡಿ ಉದ್ದ, ಐದು ಅಡಿ ತೋರವಾಗಿತ್ತು. ಅದು ದನಗಳಂತೆ ನದಿಯ ದಡದಲ್ಲಿ ಬೆಳೆಯುವ ಹುಲ್ಲನ್ನು ತಿನ್ನುತ್ತಿತ್ತು! ಮರಿಗಳಿಗೆ ಹಾಲು ಕೊಡುತ್ತಿತ್ತು!

ಮಾರ್ಟಿನನನ್ನೂ ಬಾರ್ನಿಯನ್ನೂ ಅತ್ಯಂತ ಆಶ್ಚರ್ಯಗೊಳಿಸಿದ ಇನ್ನೊಂದು ಜಾತಿಯ ಮೀನು ಅಲ್ಲಿತ್ತು. ಅವರು ಆ ಜಾತಿಯ ಮೀನುಗಳನ್ನೆಂದೂ ನೋಡಿರಲಿಲ್ಲ. ಅವುಗಳ ವಿಷಯ ಕೇಳಿಯೂ ಇರಲಿಲ್ಲ. ಒಂದು ದಿನ ಸಂಜೆ ಅಂತೋನಿಯ ಗುಲಾಮರು ನೂರಾರು ಸಣ್ಣ ಸಣ್ಣ ಮೀನುಗಳನ್ನು ಹಿಡಿದರು. ಆ ಸಣ್ಣ ಮೀನುಗಳೊಂದಿಗೆ ದೊಡ್ಡ ಮೀನುಗಳೂ ಇದ್ದುವು. ಹಿಡಿದು ಬುಟ್ಟಿಗಳಲ್ಲಿ ಹಾಕಿದಂತೆ ಆ ಮೀನುಗಳು ಆಚೆ ಈಚೆ ನೆಗೆಯುತ್ತಿದ್ದುವು. ತಪ್ಪಿಸಿಕೊಳ್ಳುತ್ತಿದ್ದವು! ಬಾರ್ನಿ ಮಾರ್ಟಿನರಿಗೂ ಇದೊಂದು ಆಟವಾಗಿ ಕಂಡಿತು. ಅವರೂ ಹಾರುತ್ತಿದ್ದ ಮೀನುಗಳನ್ನು ಹೆಕ್ಕಿ ಹಿಡಿಯಲು ಮೊಳಕಾಲು ವರೆಗಿದ್ದ ನೀರಿಗೆ ಇಳಿದರು. ಬಾರ್ನಿ ನೀರಿನಲ್ಲಿ ನಾಲ್ಕಾರು ಹಜ್ಜೆ ಇರಿಸಿದ್ದನಷ್ಟೆ! "ಡಬಾ!" ಎಂದು ಫಿರಂಗಿ ಬಿಟ್ಟಂತೆ ಸದ್ದು ಕೇಳಿಸಿತು. ಬಾರ್ನಿ ಹೆದರಿ 'ಮಾರ್ಟಿನ್' ಎಂದು ಬೊಬ್ಬಿಡುತ್ತ ದಡಕ್ಕೆ ಓಡಿದನು. ಅವನು ದಡಕ್ಕೆ ಮುಟ್ಟುವುದರೊಳಗೆ ಮತ್ತೊಂದು ಸದ್ದಾಯಿತು. ಆಗ ಬಾರ್ನಿ ಬಳಿಯಲ್ಲಿ ನಿಂತಿದ್ದ ಮಾರ್ಟಿನನನ್ನು ದೂಡಿ ಕೆಳಗೆ ಬಿದ್ದನು! ಮಾರ್ಟಿನನೂ ಕಾಲು ತಪ್ಪಿ ದಡದಲ್ಲಿ ಬಿದ್ದು ಬಿಟ್ಟನು. ಇದನ್ನೆಲ್ಲ ನೋಡಿ ಅಲ್ಲಿದ್ದ ನೀಗ್ರೋಗಳು ನಗೆಯ ಕಡಲಲ್ಲೇ ತೇಲಾಡಿದರು. ಅವರಿಂದ ನಗು ತಡೆಯಲಾಗಲಿಲ್ಲ. ಮಾರ್ಟಿನನೂ ಬಾರ್ನಿಯೂ ತಮ್ಮ ಹೆಡ್ಡುತನಕ್ಕೆ ತಾವೇ ನಗುತ್ತ ಬಿದ್ದಲ್ಲಿಂದ ಎದ್ದರು. ಅವರು ಆ ಸದ್ದೇನೆಂದು ಬಳಿಯಲ್ಲಿದ್ದ ನೀಗ್ರೋಗಳನ್ನು ಕೇಳಿದರು. ಅದಕ್ಕೆ ಆ ನೀಗ್ರೋಗಳು ಒಂದು

ಜಾತಿಯ ಮೀನುಗಳು ತಮ್ಮ ಶರೀರದ ಮುಂಭಾಗವನ್ನು ಚೆಂಡಿನಂತೆ ಉಬ್ಬಿಸುತ್ತವೆಯೆಂದೂ ಅವುಗಳನ್ನು ತುಳಿದುಬಿಟ್ಟರೆ ಅಂತಹ ದೊಡ್ಡ ಸದ್ದಾಗುತ್ತದೆಂದೂ ತಿಳಿಸಿದರು. ಅಷ್ಟೇ ಅಲ್ಲ, ಈ ವಿಚಿತ್ರ ಮೀನುಗಳಲ್ಲದೆ, ಬೆನ್ನ ಮೇಲೆ ಗರಗಸದಂತೆ ಮುಳ್ಳುಗಳಿರುವ ಒಂದು ಜಾತಿಯ ಮೀನುಗಳಿವೆಯೆಂದೂ ಅವುಗಳನ್ನು ತುಳಿದುಬಿಟ್ಟರೆ ಗಾಯಗಳಾಗುವವೆಂದೂ ಆ ವಿಚಿತ್ರ ಮೀನುಗಳ ವಿಚಾರವನ್ನೂ ವಿವರಿಸಿದರು.

ಒಂದೆರಡು ವಾರಗಳ ಅನಂತರ ವ್ಯಾಪಾರಿಯೂ ಬಾರ್ನಿ ಮಾರ್ಟಿನರೂ ಅಂತೋನಿಯ ಮನೆಯಿಂದ ಹೊರಟು, ಎಮೆಜಾನ್ ನದಿಯಲ್ಲಿ ಮುಂದುವರಿದರು. ಮುದಿ ವ್ಯಾಪಾರಿ ದೋಣಿಯ ಹಿಂಭಾಗದಲ್ಲಿ ಕುಳಿತು ಅದನ್ನು ಸರಿಯಾದ ದಾರಿಗೆ ತಿರುಗಿಸುತ್ತಿದ್ದನು. ಗಾಳಿ ಅನುಕೂಲವಾಗಿ ಬೀಸುತ್ತಿದ್ದುದರಿಂದ ದೋಣಿ ಸರಾಗವಾಗಿ ಮುಂದುವರಿಯುತಿತ್ತು. ಬಾರ್ನಿಯೂ ಮಾರ್ಟಿನನೂ ತಮ್ಮ ನಾಯಿಮರಿ ಮತ್ತು ಮಂಗನಮರಿಗಳೊಡನೆ ಆಡುತ್ತ ಕುಳಿತಿದ್ದರು. ಹೀಗೆ ದೋಣಿ ಮುಂದುವರಿಯುತ್ತಿದ್ದಾಗ ಅನುಕೂಲವಾಗಿ ಬೀಸುತ್ತಿದ್ದ ಗಾಳಿ ಫಕ್ಕನೆ ನಿಂತು ಬಿಟ್ಟಿತು. ಬಲವಾದ ಪ್ರವಾಹಕ್ಕೆ ಎದುರಾಗಿ ಹೋಗುತ್ತಿದ್ದ ದೋಣಿ ಮುಂದುವರಿಯಲಿಲ್ಲ. ಎಷ್ಟು ಯತ್ನಿಸಿದರೂ ದೋಣಿ ಮುಂದುವರಿಯುವುದೇ ಕಷ್ಟವಾಯಿತು. ಕಟ್ಟಕಡೆಗೆ ಅವರು ಬೇರೆ ಉಪಾಯ ಕಾಣದೆ ದೋಣಿಯನ್ನು ದಡ ಸೇರಿಸಿದರು. ಆಗ ಬೇಸಿಗೆಕಾಲವಾಗಿದ್ದುದರಿಂದ ಆ ಮಣ್ಣ ದಡದಲ್ಲಿ ಬಿರುಕುಗಳು ಬಿಟ್ಟಿದ್ದುವು. ಹೊಳೆಯ ನೀರು ಹೊಳೆಯೊಳಗೇ ಇತ್ತು. ಅದು ಬೇಸಿಗೆಯ ಕಡೆಗಾಲವಾಗಿತ್ತು. ಇನ್ನು ಮಳೆಗಾಲ ಪ್ರಾರಂಭವಾಗಲು ಹೆಚ್ಚುಕಾಲ ಬೇಕಾಗಿರಲಿಲ್ಲ. ಮಳೆಗಾಲ ಸಮೀಪವಾಗಿತ್ತು.

"ಜಾಗವೇನೋ ಚೆನ್ನಾಗಿದೆ" ಎನ್ನುತ್ತಾ 'ಮಾರ್ಟಿನ್

ದೋಣಿಯಲ್ಲಿದ್ದ ಗಂಟು ಮೂಟೆಗಳನ್ನು ದಡಕ್ಕೆ ತಂದು ಹಾಕ ತೊಡಗಿದನು. "ನೋಡು! ಅಲ್ಲೊಂದು ಗುಡಿಸಲು ಕಾಣುವು ದಲ್ಲ! ಖಾಲಿ ಗುಡಿಸಲಿನಂತೆ ತೋರುತ್ತದೆ! ನಾವು ಅಲ್ಲೇ ನಮ್ಮ ಗಂಟು ಮೂಟೆಗಳನ್ನು ಇಡಬಹುದಲ್ಲ! ಮಲಗ ಬಹುದಲ್ಲ!" ಎಂದು ಬಾರ್ನಿ ನುಡಿದನು. "ಸರಿ, ಸರಿ, ಅಲ್ಲಿಗೇ ಹೋಗುವ." ಎಂದು ಮುದುಕ ವ್ಯಾಪಾರಿ ಮರುನುಡಿಯುತ್ತ ಮುಂದು ವರಿದನು.

ಆ ಗುಡಿಸಲು ಬಹಳ ಹಳತು. ಮಾಡಿಗೆ ಹೊದಿಸಿದ್ದ ತಾಳೆಗರಿಗಳೆಲ್ಲ ಕುಂಬಾಗಿ ಕದಲತೊಡಗಿದ್ದವು. ಮಾರ್ಟಿನನೂ ಬಾರ್ನಿಯೂ ವ್ಯಾಪಾರಿಯ ಆದೇಶದಂತೆ ಸಾಮಾನುಗಳನ್ನೆಲ್ಲ ಒಂದು ಎತ್ತರ ಸ್ಥಳದಲ್ಲಿ ಇರಿಸಿದರು. ಅಷ್ಟಾಗುವಾಗ ಆಕಾಶ ದಲ್ಲಿ ಮೋಡಗಳು ಕಾಣಿಸಿದುವು. ವ್ಯಾಪಾರಿ ಸಾಮಾನುಗಳ ಹೊರೆಗಳ ಮೇಲೆ ಒಣ ತಾಳೆಗರಿಗಳನ್ನು ಮುಚ್ಚಲು ಹೇಳಿದನು. ಆ ಮೇಲೆ ಆ ಮೂವರೂ ಗುಡಿಸಲ ಒಳಗೆ ತಮ್ಮ ಮಲಗುವ ಉಯ್ಯಾಲೆಗಳನ್ನು ಕಟ್ಟಿದರು. ಬೆಂಕಿ ಉರಿಸಿ ಅಡುಗೆ ತಯಾರಿಸಿ ಬೆಳಕಿರುವಾಗಲೇ ಊಟ ಮುಗಿಸಿದರು. ಇಷ್ಟಾಗುವಾಗ ಮಳೆ ಸುರಿಯ ತೊಡಗಿತು! ಭಯಂಕರ ಮಳೆ! ಅಂಥ ಭಯಂಕರ ವಾದ ಮಳೆಯನ್ನು ಅವರು ಕಂಡಿರಲಿಲ್ಲ, ಕೇಳಿರಲಿಲ್ಲ. ಆ ಹಳೆ ಗುಡಿಸಿಲೆಲ್ಲ ಸೋರ ತೊಡಗಿತು. ಆ ಮೂವರೂ ಒಂದು ಮೂಲೆ ಯಲ್ಲಿ ಸುಮ್ಮಗೆ ನಿಂತುಕೊಂಡರು. ಇಷ್ಟಾಗುವಾಗ ನೆರೆ ನೀರು ಏರ ತೊಡಗಿತು. ಗುಡಿಸಲೊಳಗೂ ನೀರು ಬಂತು. ಅಷ್ಟರಲ್ಲಿ ಗುಡಿಸಲ ಒಂದು ಮೂಲೆಯ ನೆಲ ಉಬ್ಬಿ ಒಡೆಯುವುದೂ, ಭಯಂಕರವಾದ ಸದ್ದೂ ಒಮ್ಮೆಗೆ ಕಂಡು ಕೇಳಿಸಿತು. ಮೂವರು ಹೆದರಿಕೆಯಿಂದ ಆ ಕಡೆಗೇ ನೋಡುತ್ತಿದ್ದಾಗ ಒಂದು ಭಯಂಕರ ವಾದ ಮೊಸಳೆ ಆ ಬಿರುಕಿನಿಂದ ತಲೆ ಹೊರಗೆ ಹಾಕಿ, ಮೆಲ್ಲಗೆ ಹೊರ ಬಂದು ನೆರೆ ನೀರಿನಲ್ಲಿ ಇಳಿದು ಹೋಯಿತು! ಇದನ್ನು

ನೋಡಿ ಆ ಮೂವರೂ ನಡುಗಿದರು. ಕತ್ತಲು ಕತ್ತಲಾಗುವಾಗ ಮಳೆ ನಿಂತಿತು. ಆ ಒಂದೇ ಮಳೆಯಿಂದ ಆ ಪ್ರದೇಶದ ಪ್ರಾಕೃತಿಕ ಸ್ವಭಾವವೇ ಬದಲಾಗಿತ್ತು! "ಇನ್ನು ಮಳೆಗಾಲ ಸುರುವಾಯಿತು. ನಾಳೆ ಬೆಳಗಾದೊಡನೆಯೇ ಇಲ್ಲೇ ಬಳಿಯಲ್ಲಿರುವ ಯಾವುದಾದರೊಂದು ಹಳ್ಳಿಯನ್ನಾಶ್ರಯಿಸಿ, ಮಳೆಗಾಲವನ್ನು ಕಳೆಯಬೇಕು. ಮಳೆಗಾಲ ಕಳೆಯದೆ ಎಲ್ಲಿಗೂ ಹೊರಡುವಂತಿಲ್ಲ." ಎಂದು ವ್ಯಾಪಾರಿ ಹೇಳಿದನು. ಈ ಮಾತು ಕೇಳಿ ಬಾರ್ನಿಗೂ ಮಾರ್ಟಿನನಿಗೂ ತುಸು ಬೇಸರವಾಯಿತು. ಅಂದಿನ ಇರುಳನ್ನು ಅವರು ಒದ್ದೆಯಾಗಿ ನಿದ್ದೆಯಿಲ್ಲದೆ, ಆ ಗುಡಿಸಲಲ್ಲಿ ನಿಂತುಕೊಂಡೇ ಕಳೆದರು.

## ಹದಿಮೂರು

ಬ್ರೆಜಿಲಿನ ಮಳೆಗಾಲ ಭಯಂಕರವಾದುದು. ಮಳೆಗಾಲದಲ್ಲಿ ದೇಶದ ಪ್ರಾಕೃತಿಕ ಸ್ವಭಾವವೇ ಬದಲಾಗುತ್ತಿತ್ತು. ಮಳೆಗಾಲದಲ್ಲಿ ಎಮೆಜಾನ್ ನದೀತೀರವೆಲ್ಲ ನೆರೆ ನೀರಿನಿಂದ ಮುಳುಗಿ ಹೋಗುತ್ತದೆ. ನಾಲ್ಕುಸಾವಿರ ಮೈಲುಗಳಷ್ಟು ಉದ್ದವಿರುವ ಆ ಎಮೆಜಾನ್ ನದಿಯಲ್ಲಿ ಎರಡು ಸಾವಿರ ಮೈಲುಗಳಷ್ಟು ಉದ್ದಕ್ಕೂ, ಒಂದು ಮೈಲಿನಿಂದ ತೊಡಗಿ ಇಪ್ಪತ್ತು ಮೈಲುಗಳಷ್ಟು ಅಗಲಕ್ಕೂ ನೆರೆ ತುಂಬುತ್ತದೆ, ಆಗ ಅದು ಹೊಳೆಯಲ್ಲ. ಒಂದು ದೊಡ್ಡ ಸಮುದ್ರ! ಆ ದೇಶದ ಭಾಷೆಯಲ್ಲಿ ಅದಕ್ಕೆ 'ಗಾವೊ' ಎಂದು ಹೆಸರು. ಈ ಮಳೆಗಾಲದ ನೆರೆಕಾಲದಲ್ಲಿ ನದೀ ತೀರದಲ್ಲಿ ವಾಸಮಾಡುವ ಮೂಲನಿವಾಸಿಗಳಾದ ರೆಡ್ ಇಂಡಿಯನರು ದೋಣಿಗಳಲ್ಲಿಯೂ ತೆಪ್ಪಗಳಲ್ಲಿಯೂ ತೇಲಾಡುತ್ತ, ಮೀನು ಮತ್ತು ಆವೆಗಳ ಮಾಂಸ ತಿಂದು ಬದುಕುತ್ತಾರೆ.

ಮಳೆಗಾಲ ಸುರುವಾದ ಕಾರಣ ಮುದಿ ವ್ಯಾಪಾರಿಯು ಅಲ್ಲೇ ಒಂದು ಹಳ್ಳಿಯಲ್ಲಿದ್ದು, ಮಳೆಗಾಲವನ್ನು ಕಳೆಯುವುದೆಂದು

ನಿಶ್ಚಯಿಸಿದನು. ಅವನ ಈ ಅಭಿಪ್ರಾಯ ಮಾರ್ಟಿನನಿಗೂ, ಬಾರ್ನಿಗೂ ಒಪ್ಪಿಗೆಯಾಗಲಿಲ್ಲ. ಆದಷ್ಟು ಬೇಗನೇ ವಜ್ರದ ಗನಿಗಳಿಗೆ ಹೋಗಬೇಕೆಂದು ಬಾರ್ನಿಗೆ ಆಸೆ. ಮಾರ್ಟಿನನಿಗೆ ದೇಶವನ್ನು ನೋಡುವ ಇಚ್ಛೆ. ಕಡೆಗೆ ವ್ಯಾಪಾರಿ "ನದಿಯ ನೀರು ತುಂಬಿ ಹರಿಯಲು ಸುರುವಾದ ಮೇಲೆ ಹೊರಡುವ. ಆಗ ಹೆಚ್ಚು ಸೆಳೆತವಿರುವುದಿಲ್ಲ." ಎಂದು ಬಾರ್ನಿ ಮಾರ್ಟಿನರನ್ನು ಸಮಾಧಾನ ಪಡಿಸಿದನು. ಕೆಲವು ದಿನಗಳ ವರೆಗೆ ಹಾಗೆಯೇ ಅವರು ಉದಾಸೀನರಾಗಿ ಕಾಲ ಕಳೆದರು. ನೆರೆಯ ನೀರು ಒಂದು ಸ್ಥಿತಿಗೆ ಬಂದಂತಾದ ಕೂಡಲೇ ಮೂವರೂ ಹೊರಟರು. ಅವರು ಎಷ್ಟೋ ದಿನಗಳ ವರೆಗೆ ಏರಿದ ನೀರಿನಲ್ಲೇ ಮುಂದುವರಿದರು. ಮತ್ತು ನದಿಯ ಮುಖ್ಯ ಪ್ರವಾಹದಲ್ಲಿ ಮುಂದುವರಿದರು. ನದಿಯ ನೀರು ಎಷ್ಟು ವಿಶಾಲವಾಗಿ ಹರಡಿತ್ತೆಂದರೆ, ಎಷ್ಟು ದೂರಕ್ಕೆ ದೃಷ್ಟಿ ಹರಿಸಿದರೂ, ಒಂದಿಷ್ಟು ನೆಲ ಕಾಣಿಸುತ್ತಿರಲಿಲ್ಲ. ನೆಲವನ್ನು ಕಾಣದೆ ಎಷ್ಟೋ ದಿನಗಳ ಪ್ರಯಾಣ ಮಾಡಿದ ಮೇಲೆ ಅವರು ಎರಡು ಕಡೆಗಳಿಂದಲೂ ಕಡಿದಾಗಿ, ಸಪುರವಾಗಿದ್ದ ಪ್ರದೇಶವನ್ನು ಸೇರಿದರು. ಆ ದಿನ ಅಲ್ಲಿ ಇಳಿದು ಆ ರಾತ್ರಿಯನ್ನು ಅಲ್ಲೇ ಕಳೆಯುವುದೆಂದು ನಿಶ್ಚಯಿಸಿ, ಇಳಿಹೊತ್ತಿನಲ್ಲಿ ದಡ ಸೇರಿದರು. ಎಷ್ಟೋ ದಿನಗಳಿಂದ ವಿಶ್ರಾಂತಿ ಇಲ್ಲದ ಅವರಿಗೆ ಒಮ್ಮೆ ದಡ ಸೇರಿದೊಡನೆಯೇ ಸೆರೆಮನೆಯಿಂದ ಹೊರ ಬಂದಷ್ಟು ಹರ್ಷವಾಯಿತು.

"ಇಂದು ರಾತ್ರಿಯನ್ನು ನಾವು ಸುಖವಾಗಿ ಕಳೆಯಬಹುದೆಂದು ತೋರುತ್ತದೆ" ಎಂದು ಒಣಕಡ್ಡಿಗಳನ್ನು ಒಟ್ಟು ಕೂಡಿಸುತ್ತಾ ಮಾರ್ಟಿನ್ ನುಡಿದ. "ಹಾಳು ಸೊಳ್ಳೆಗಳ ಕಾಟವಿಲ್ಲದಿದ್ದರಲ್ಲವೇ? ಯಾವುದನ್ನೂ ನಿಶ್ಚಯವಾಗಿ ಹೇಳಲು ಆಗುವುದಿಲ್ಲ." ಎಂದು ಬಾರ್ನಿ ಉತ್ತರಿಸಿದನು. "ಹೌದು, ನಿನಗೆ ಎಲ್ಲದರಲ್ಲಿಯೂ ಸಂಶಯವೇ. ಈ ಸಂಶಯವು ಯಾವಾಗ ನಿವಾರಣೆಯಾಗುವುದೋ" ಎಂದು ಮಾರ್ಟಿನ್ ನುಡಿದ.

"ಹಾಂ! ಆ ಕೋಡುಕಲ್ಲುಗಳನ್ನು ನೋಡು. ಅಲ್ಲಿ ಯಾರೋ ನಿಂತು ಕೊಂಡಂತೆ ಕಾಣುತ್ತದೆ. ಅದೂ ಸಂಶಯವೇ" ಎಂದ ಬಾರ್ನಿ.

"ಅದು ಸಂಶಯವಲ್ಲ! ಅವನೊಬ್ಬ ಮೂಲ ನಿವಾಸಿಯಲ್ಲ ವೇ? ರೆಡ್ ಇಂಡಿಯನನಲ್ಲವೇ? ನಮಗೇನಾದರೂ ಗೊತ್ತಿದೆಯೇ? ರೆಡ್ ಇಂಡಿಯನ್ ಕಾಡು ಜನರ ಗುಂಪಿಗೆ ಸೇರಿದವನೇ, ನಾಗರಿ ಕರ ಗುಂಪಿಗೆ ಸೇರಿದವನೋ," ಎಂದು ಮಾರ್ಟಿನ್ ವ್ಯಾಪಾರಿ ಯನ್ನು ಕೇಳಿದನು. "ಏನೋ, ಯಾರಿಗೆ ಗೊತ್ತು." ಎಂದು ವ್ಯಾಪಾರಿ ಉತ್ತರಿಸುತ್ತಿದ್ದಂತೆ, ರೆಡ್ ಇಂಡಿಯನ್ ಅವರನ್ನೇ ದಿಟ್ಟಿಸಿ ನೋಡುತ್ತಾ, ಅವರೆದುರು ನಿಂತಿದ್ದ. ಅವನು ಹೆಗಲಿಗೆ ಒಂದು ಬತ್ತಳಿಕೆಯನ್ನು ತೂಗಹಾಕಿದ್ದ. ಅದರಲ್ಲಿ ಕೆಲವು ಬಾಣ ಗಳು ಇದ್ದವು. ಹಾಗೆಂದು ಅವನ ಕೈಯಲ್ಲಿ ಬಿಲ್ಲು ಇರಲಿಲ್ಲ. ಒಂದು ಉದ್ದದ ಬರ್ಚಿ ಇತ್ತು. ಅವನು ನೋಟಕ್ಕೆ ಬಹಳ ವಿಕಾರ ವಾಗಿ ಕಾಣುತ್ತಿದ್ದನು. ಕುಳ್ಳನಾದ ಅವನ ಮೋರೆಯ ಮೇಲೆಲ್ಲ ಗೆರೆಗೆರೆಯಾಗಿ ಬಣ್ಣ ಬಳಿದಿತ್ತು. ಅವನ ತುಟಿಗಳು ಕತ್ತರಿಸಿ ಹೋಗಿದ್ದುವು. ಮೈಮೇಲೆ ತುಂಬಾ ಗಾಯದ ಕಲೆಗಳಿದ್ದುವು. ಅವನು ತುಸು ಹೊತ್ತು ಈ ಮೂವರನ್ನು ನೋಡುತ್ತಾ ನಿಂತು, ಫಕ್ಕನೆ ಕೂಗಿಕೊಂಡ!

ಆ ಮುದಿ ರೆಡ್ ಇಂಡಿಯನ್ ವಿಕಾರವಾಗಿ ಕೂಗಿಕೊಂಡ ಕೆಲವೇ ಮಿನಿಟುಗಳಲ್ಲಿ ಇಪ್ಪತ್ತೈದು ಮೂವತ್ತು ಮಂದಿ ರೆಡ್ ಇಂಡಿಯನರು ಓಡಿ ಬಂದು ಈ ಮೂವರ ಸುತ್ತಲೂ ನಿಂತು ಬಿಟ್ಟರು! ಇವರ ಮೇಲೆ ಬೀಳಲು ಸಿದ್ಧರಾಗುತ್ತಿದ್ದರು. ಕ್ರೂರಿ ಗಳಾದ ಅವರು ತಮ್ಮನ್ನು ಸುತ್ತುಕಟ್ಟಿದುದನ್ನು ಕಂಡು, ಬಾರ್ನಿ ಯೂ ತನ್ನ ಕೈಯಲ್ಲಿದ್ದ ತರಕಾರಿ ಕೊಯ್ಯುವ ಚೂರಿಯನ್ನು ಮಾರ್ಟಿನನ ಕೈಯಿಗಿತ್ತನು. "ನೀನಿದನ್ನು ಹಿಡಿದು ಕೋ, ನನಗೆ ಪಿಸ್ತೂಲು ಇದೆ. ಇವರನ್ನು ಒಂದು ಕೈ ನೋಡ್ಬಿ ಬಿಡುವ."

ಎಂದು ನುಡಿದ. ಆಗ ಹೆದರಿ ನಡುಗುತ್ತಿದ್ದ ಮುದಿ ವ್ಯಾಪಾರಿ "ಸುಮ್ಮನಿರಿ, ಅವರ ಮೇಲೆ ಬೀಳುವ ಕೆಲಸ ಬೇಡ, ಅವರು ಇಷ್ಟು ಮಂದಿ ಇರುವಾಗ ಸುಮ್ಮನೆ ಮಕ್ಕಳಾಟಿಕೆಯೇನು? ನಮ್ಮನ್ನು ಕೊಂದೇ ಬಿಟ್ಟಾರು!" ಎಂದು ತಡೆದನು.

ಮುದುಕನ ಮಾತು ಮುಗಿಯುವಷ್ಟರಲ್ಲಿ ಮತ್ತೊಂದು ಐವತ್ತು ಮಂದಿ ರೆಡ್ ಇಂಡಿಯನರು ಅಲ್ಲಿ ಕೂಡಿದ್ದರು. ಬಾರ್ನಿ ಮಾರ್ಟಿನರು ಮುಂದೇನು ಗತಿಯೆಂದು ಯೋಚಿಸುತ್ತಿರುವಾಗಲೇ, ಆ ಇಬ್ಬರನ್ನೂ ಆ ಕ್ರೂರಿಗಳು ಹಿಂಬದಿಯಿಂದ ಹಿಡಿದು, ಅವರ ಕೈಗಳನ್ನು ಹಿಂದಕ್ಕೆ ಜೋಡಿಸಿ ಕಟ್ಟಿಯೇ ಬಿಟ್ಟರು. ಮುದುಕ ನಿಂದ ಏನೂ ಸಾಗದೆಂದು ಅವರಿಗೆ ಗೊತ್ತು. ಇಷ್ಟೆಲ್ಲ ನಡೆಯು ವಾಗ ಬಾರ್ನಿಯ ನಾಯಿ ಆ ಜನರಿಗೆ ಸುತ್ತು ಸುತ್ತು ಬಂದು ಬೊಗಳುತ್ತಿತ್ತು. ಮಾರ್ಟಿನನ ಕೋತಿ ದೋಣಿಯಲ್ಲಿ ಸುಮ್ಮಗೆ ಕೂತಿತ್ತು.

ಆ ಕಾಡು ಜನರು ಮಾರ್ಟಿನ್, ಬಾರ್ನಿಯರನ್ನು ಒಂದೆಡೆ ಕುಳ್ಳಿರಿಸಿ, ದೋಣಿಗೆ ಹೋಗಿ ಅಲ್ಲಿದ್ದ ಗಂಟುಮೂಟೆಗಳನ್ನೆಲ್ಲ ದೋಚಿಕೊಂಡರು. ದೊಡ್ಡ ಗಂಟು ಸಿಕ್ಕಿತೆಂದು ಸಂತೋಷ ದಿಂದ ಕುಣಿದಾಡಿದರು. ಮತ್ತು ಅಲ್ಲಿದ್ದ ಸಾಮಾನುಗಳನ್ನೆಲ್ಲ ಹೆಕ್ಕಿ, ಸಣ್ಣ ಸಣ್ಣ ಗಂಟು ಕಟ್ಟಿ, ತಮ್ಮ ಬೆನ್ನುಗಳಿಗೆ ಕಟ್ಟಿ ಕೊಂಡರು. ಮತ್ತೆ ಆ ಮೂವರನ್ನು ಕೈ ಸನ್ನೆಯಿಂದ ತಮ್ಮೊಂದಿಗೆ ಬರುವಂತೆ ಹೇಳಿದರು; ಕಾಡಿನೊಳಗೆ ನಡೆದರು. ಬಾರ್ನಿಯ ನಾಯಿಯೂ ಅವರೊಟ್ಟಿಗೆ ಹೊರಟಿತು. ಇವರು ಹೀಗೆ ಹೋಗು ತ್ತಿರುವುದನ್ನು ನೋಡಿ ಮಾರ್ಟಿನನ ಮಂಗನೂ ನಾಯಿಯ ಬೆನ್ನ ಮೇಲೆ ಕುಳಿತು ಸವಾರಿ ಮಾಡಿತು!

ಆ ರೆಡ್ ಇಂಡಿಯನರ ಕೈಯಲ್ಲಿದ್ದುದು ಬರ್ಚಿಯಲ್ಲ! ಉದ್ದ ಕೊಳವೆಗಳು! ಬಾಣಗಳು ತುಂಬಿದ್ದ ಬತ್ತಳಿಕೆಗಳಿವೆ! ಬಿಲ್ಲಿಲ್ಲ! ಉದ್ದದ ಕೊಳವೆಯೊಂದಿದೆ! ಇದೇಕೆ? ಎಂದು ಮಾರ್ಟಿನ್,

ಬಾರ್ನಿಯದು ತಂತಮ್ಮೊಳಗೆ ಮಾತಾಡುತ್ತಿದ್ದಂತೆಯೇ ಅವರ ಸಂಶಯ ಪರಿಹಾರವಾಯಿತು. ಆ ಗುಂಪಿನಲ್ಲಿ ಮುಂದೆ ಹೋಗುತ್ತಿದ್ದವನೊಬ್ಬನು ತನ್ನ ಬತ್ತಳಿಕೆಯಿಂದ ಬಾಣವೊಂದನ್ನು ತೆಗೆದು ಆ ನಳಿಗೆಯ ತುದಿಗೆ ಸಿಕ್ಕಿಸಿ ಇನ್ನೊಂದು ತುದಿಯನ್ನು ಬಾಯಿಗಿಟ್ಟು ಫೂ ಎಂದು ಊದಿದನು. ಬಾಣ ಹಾರಿ ಹೋಗಿ ಮರದ ಕೊಂಬೆಯ ಮೇಲೆ ಕುಳಿತಿದ್ದ ಹಕ್ಕಿಯೊಂದನ್ನು ಕೆಳಗೆ ಕೆಡವಿತು.

"ಈ ಕೊಳವೆ ಯಾಕೆಂದು ಈಗ ತಿಳಿಯಿತು! ಇದು ಊದುಗೊಳವೆ. ಇದರ ವಿಚಾರ ನಾನು ಕೇಳಿದ್ದೆ" ಎಂದು ಬಾರ್ನಿ ಮಾರ್ಟಿನನ ಕಿವಿಯಲ್ಲಿ ಪಿಸುನುಡಿದನು. "ಹೌದು! ಆ ಬಾಣಗಳು ವಿಷದ ಬಾಣಗಳೋ ಎಂದು ನನಗೆ ಸಂಶಯ. ಇಲ್ಲವಾದರೆ ಹಕ್ಕಿಯ ಗರಿಗೆ ಮಾತ್ರ ಬಾಣತಗಲಿತ್ತು! ಹಕ್ಕಿ ಕೆಳಗೆ ಬಿತ್ತು! ಅದು ಹೇಗೆ?" ಎಂದು ಮಾರ್ಟಿನ್ ಬಾರ್ನಿಯನ್ನು ಚಿವುಟಿದನು.

ಆ ಮೂಲನಿವಾಸಿಗಳು ತಮ್ಮ ಕೈದಿಗಳಿಗೆ ಹೆಚ್ಚು ಪೀಡೆ ಕೊಡಲಿಲ್ಲ. ತಮ್ಮೊಡನೆ ತಮ್ಮಷ್ಟೇ ವೇಗವಾಗಿ ನಡೆಯಲು ಮಾತ್ರ ಒತ್ತಾಯಿಸಿದರು. ಎಷ್ಟೋ ದೂರದ ವರೆಗೆ ಗುಡ್ಡಗಳನ್ನು ಹತ್ತಿ ಕಣಿವೆಗಳನ್ನು ಇಳಿದು, ಅಡ್ಡಗಳಲ್ಲಿ ನಡೆದು ಹೋದ ಮೇಲೆ ಬಾರ್ನಿ, ಮಾರ್ಟಿನರ ಕಟ್ಟಿದ ಕೈಗಳನ್ನು ಬಿಚ್ಚಿದರು. ಆ ಪ್ರದೇಶವೆಲ್ಲ ಕಾಡುಗುಡ್ಡಗಳಿಂದ ತುಂಬಿದ ದೇಶವಾಗಿತ್ತು. ಹೀಗೆ ಹಲವು ದಿನಗಳ ವರೆಗೆ ಆ ಕಾಡುಗುಡ್ಡಗಳಲ್ಲಿ ನಡೆದು ಅವರು ಒಂದು ಸುಂದರವಾದ ಕೊಳದೆಡೆಗೆ ಬಂದರು. ಪರ್ವತದ ಆ ಮಗ್ಗುಲು ಪ್ರದೇಶವು ನೋಟಕ್ಕೆ ಸೊಗಸಾಗಿತ್ತು. ಆ ದಿನ ಅವರು ಅಲ್ಲೇ ಉಳಕೊಂಡರು. ಆ ದಿನ ರಾತ್ರಿ ಬಾರ್ನಿ ಮಾರ್ಟಿನನೊಡನೆ "ಗೆಳೆಯಾ, ನಾನು ಒಂದು ವಿಷಯ ಯೋಚಿಸಿದ್ದೇನೆ. ಏನೆಂದು ಕೇಳುವಿಯೋ?" ಎಂದನು. "ಏನದು ಹೇಳಿಬಿಡು" ಮಾರ್ಟಿನ್ ಹೇಳಿದ. "ಅದೋ? ನಾವು ಜೀವವಿರುವ

ವರೆಗೂ ಇವರ ಸೆರೆಯಾಳುಗಳಾಗಿ, ಗುಲಾಮರಾಗಿ ಕಾಲಕಳೆಯ ಬೇಕಾಗುತ್ತದೇನೋ? ಅದೇ ನನ್ನ ವಿಚಾರ" ಎಂದು ಬಾರ್ನಿ ಮೌನ ತಾಳಿದನು.

"ನೀನು ಸುಮ್ಮಗಿರು. ಆ ಚಿಂತೆ ಕಟ್ಟಿಕೊಳ್ಳ ಬೇಡ. ಸದ್ಯಕ್ಕೆ ಇವರು ನಮ್ಮನ್ನು ಕೊಲ್ಲದೆ ಬಿಟ್ಟರೆ ಸಾಕು. ಒಂದಲ್ಲ ಒಂದು ದಿನ ತಪ್ಪಿಸಿಕೊಳ್ಳುವ. ಈಗ ಸುಮ್ಮಗಿರು" ಎಂಧು ಮಾರ್ಟಿನ್ ಬಾರ್ನಿಯನ್ನು ಸಮಾಧಾನ ಪಡಿಸಿದ.

ಇವರು ಹೀಗೆ ಪಿಸಿಪಿಸಿ ಮಾತನಾಡುತ್ತಿದ್ದಾಗ ಅವರ ಧನಿ ಮುದಿ ವ್ಯಾಪಾರಿ ಮಾತ್ರ ಯಾವ ಚಿಂತೆಯೂ ಇಲ್ಲದವನಂತೆ ಮಲಗಿ ಗೊರಕೆ ಹೊಡೆಯುತ್ತಿದ್ದನು. ಮೂಲನಿವಾಸಿಗಳು ಏನೋ ಮಾತಾಡುತ್ತಿದ್ದರು. ಒಮ್ಮೊಮ್ಮೆ ಅವರ ಮಾತಿನಲ್ಲಿ ಸಿಟ್ಟಿನ ಕಾವು ಏರುತ್ತಿತ್ತು; ಅವರೊಳಗೆ ಯಾವುದೋ ವಿಷಯವಾಗಿ ಜಗಳವಾಗುವಂತೆ ತೋರುತ್ತಿತ್ತು.

ಮರುದಿನ ಬೆಳಗಾದೊಡನೆಯೇ ಕ್ರೂರಿಗಳಾದ ಆ ಮೂಲ ನಿವಾಸಿಗಳು ಮುದಿ ವ್ಯಾಪಾರಿಯ ದೋಣಿಯಿಂದ ತಂದಿದ್ದ ಸಾಮಾನುಗಳನ್ನೆಲ್ಲ ಎರಡು ಪಾಲು ಮಾಡಿ, ತಾವೂ ಎರಡು ಪಾಲಾಗಿ ನಿಂತರು. ಇದನ್ನು ನೋಡಿ ಬಾರ್ನಿ, "ಮಾರ್ಟಿನ್, ಇವರು ನಮ್ಮನ್ನೂ ಪಾಲುಮಾಡಿ ಬಿಡುವರೇನೋ? ಹಾಗೆ ಮಾಡಿ ದರೆ, ನಾವು ಅದಕ್ಕೆ ಒಪ್ಪಬಾರದು." ಎಂದನು. "ಒಪ್ಪುವುದೇನು? ಹಾಗೇನಾದರೂ ಆದರೆ ನಾವು ಜೀವವಿರುವ ವರೆಗೆ ಹೋರಾ ಡುವ. ಅಂತೂ ನಮ್ಮನ್ನು ಬೇರೆ ಬೇರೆ ಮಾಡಲು ಬಿಡಬಾರದು." ಎಂದು ಬಾರ್ನಿ ನುಡಿಯುತ್ತಿದ್ದಂತೆಯೇ, ಆ ಜನರು ಮಾರ್ಟಿನ ನನ್ನು ಒಂದು ಕಡೆ, ಬಾರ್ನಿಯನ್ನೂ ಮುದಿ ವ್ಯಾಪಾರಿಯನ್ನೂ ಇನ್ನೊಂದು ಕಡೆ ನಿಲ್ಲಿಸಿ, ಪಾಲು ಮಾಡಿಕೊಂಡರು!

ಇದನ್ನು ಕಂಡು ಆ ಗೆಳೆಯರಿಬ್ಬರ ಹೃದಯವೇ ಒಡೆದು ಹೋಗುವಂತೆ ಅವರಿಗೆ ಭಾಸವಾಯಿತು. ಅವರಿಬ್ಬರೂ ತಪ್ಪಿಸಿ

ಕೊಳ್ಳಲು ನೋಡಿದರು. ಆಗ ಆ ಜನರು ಅವರನ್ನು ಹಿಡಿದು ಕೊಂಡರು. ಆಗಲೂ ಈ ಗೆಳೆಯರು ಕೋಪದಿಂದ ಏನೇನೋ ಆ ಕ್ರೂರ ಜನರೊಡನೆ ಒದ್ದಾಡಿದರು; ಜಗಳಾಡಿದರು. ಇದೊಂದಕ್ಕೂ ಆ ಕ್ರೂರಿಗಳು ಕಿವಿ ಕೊಡುವರೇ? ಅವರು ಕೂಡಲೇ ಇವರ ಕೈಗಳನ್ನು ಹಿಂದಕ್ಕೆ ಕಟ್ಟಿ ತಂತಮ್ಮ ದಾರಿ ಹಿಡಿದರು. ಆಗಲೂ ಇವರಿಬ್ಬರೂ ಬೊಬ್ಬೆ ಹೊಡೆಯುತ್ತಲೇ ಇದ್ದರು. "ಒಂದಲ್ಲ ಒಂದು ದಿನ ಈ ಕ್ರೂರಿಗಳ ಕೈಯಿಂದ ತಪ್ಪಿಸಿಕೊಂಡು ನಾವು ಜತೆ ಸೇರುವ" ಎಂದು ಇಬ್ಬರೂ ಗಟ್ಟಿಯಾಗಿ ನುಡಿಯುತ್ತ ಹೋದರು.

## ಹದಿನಾಲ್ಕು

ಮಾರ್ಟಿನನ ಮನಸ್ಸು ತುಂಬಾ ಬೇಸರಪಟ್ಟಿತು. ಅವನು ನಗಾಡಲು ಯತ್ನಿಸಿದನು; ಆಗಲಿಲ್ಲ. ತನ್ನ ಪ್ರೀತಿಯ ಗೆಳೆಯ ಬಾರ್ನಿಯ ವಿಷಯ ನೆನಸಿದನು. ನೆನಪೇ ಬರಲೊಲ್ಲದು. ಅವನಿಗೆ ತಾನು ಬ್ರೆಜಿಲಿನ ಯಾವ ಭಾಗದಲ್ಲಿರುವೆನೆಂದೂ ತಿಳಿಯದು. ಆ ರೆಡ್ ಇಂಡಿಯನರನ್ನಲ್ಲದೆ ಬೇರೆ ಮನುಷ್ಯರನ್ನೂ ಅವನು ಕಾಣಲಿಲ್ಲ. ಮೂಲನಿವಾಸಿಗಳೂ ಅಷ್ಟೇ! ಅವನನ್ನು ಒಬ್ಬ ಗೆಳೆಯನಂತೆಯೂ ಕಾಣಲಿಲ್ಲ; ಹಗೆಯೆಂತಲೂ ತಿಳಿಯಲಿಲ್ಲ. ಅವರ ಮಾತೂ ಅವನಿಗೆ ತಿಳಿಯುತ್ತಿರಲಿಲ್ಲ. ಇದೊಂದನ್ನೂ ಅವನು ಗಣ್ಯ ಮಾಡಲಿಲ್ಲ. ಕಷ್ಟಸುಖಗಳಲ್ಲಿ ಒಂದಾಗಿ ಬೆರೆತು ಪ್ರೋತ್ಸಾಹ ಕೊಡುತ್ತಿದ್ದ ಗೆಳೆಯ ಬಾರ್ನಿ ದೂರವಾದುದಕ್ಕಾಗಿ ಚಿಂತಿಸುತ್ತಿದ್ದ; ಅವರನ್ನು ಬೇರೆ ಬೇರೆ ಮಾಡಿದುದಕ್ಕಾಗಿ ಆ ರೆಡ್ ಇಂಡಿಯನರನ್ನು ಶಪಿಸುತ್ತಿದ್ದ.

ಗುಡ್ಡ ಬೆಟ್ಟಗಳ ಮೇಲೆ, ಕಾಡು ಕಣಿವೆಗಳಲ್ಲಿ, ಬಯಲು ಬಾಣೆಗಳಲ್ಲಿ ಹಲವು ದಿನ ಕಾಲು ಎಳೆದು ಅವರೆಲ್ಲ ಆ ಕಾಡು ಜನರ ವಾಸ ಸ್ಥಳಕ್ಕೆ ಮುಟ್ಟಿದರು. ಅಲ್ಲಿಗೆ ತಲುಪುವ ಮೊದಲೇ

ಮಾರ್ಟಿನನ ಕಟ್ಟಿದ ಕೈಗಳನ್ನು ಅವರು ಬಿಚ್ಚಿದ್ದರು. ಆಗ ಅವನು ಒಂದೆರಡು ಸಲ ತಪ್ಪಿಸಿಕೊಂಡು ಹೋಗಲು ಯೋಚಿಸಿದ್ದನು. ಆದರೆ ಅಂತುಗೊಂತು ಇಲ್ಲದ ಕಾಡಿನಲ್ಲಿ ಕಾಡುಜನರಿಂದ ತಪ್ಪಿಸಿಕೊಂಡು ಮತ್ತೊಮ್ಮೆ ಅವರ ಕೈಗೆ ಸಿಕ್ಕಿ ಬಿದ್ದರೆ! ಹಾಗಾಗಿ ಆ ಯೋಚನೆಯನ್ನೇ ಬಿಟ್ಟಿದ್ದನು. ಅವನ ಕಟ್ಟುಗಳನ್ನು ಬಿಚ್ಚಿದರೂ, ಅವನು ಎಲ್ಲಿ ಹೋಗಲೂ ಸಾಧ್ಯವಿಲ್ಲವೆಂದು ತಿಳಿದಿದ್ದರೂ, ಕ್ರೂರ ಮುಖದ, ಗಟ್ಟಿಮುಟ್ಟಾದ ಮೈಕಟ್ಟಿನ ಮುದುಕ ರೆಡ್ ಇಂಡಿಯನನೊಬ್ಬನು ನೆರಳಿನಂತೆ ಮಾರ್ಟಿನನ ಹಿಂದೆಯೇ ಅವನ ಚಲನವಲನಗಳನ್ನು ಕಾಯುತ್ತ, ಅವನು ಕಣ್ಣು ತಪ್ಪಿಸಿ ಹೋಗದಂತೆ ಜಾಗರೂಕನಾಗಿದ್ದನು.

ಕಾಡುಜನರ ಹಳ್ಳಿಗೆ ಬಂದೊಡನೆಯೇ ಅವನನ್ನು ಕಾಡುಜನರು ಒಂದು ಕುಟುಂಬದವರೊಡನೆ ವಾಸಮಾಡುವಂತೆ ಕೈಸನ್ನೆಗಳಿಂದ ಸೂಚನೆ ಕೊಟ್ಟರು. ಮತ್ತು ಜೋಳದ ಹೊಲದಲ್ಲಿ, ಮರಗೆಣಸಿನ ತೋಟದಲ್ಲಿ ಕೆಲಸ ಮಾಡಲು ಹಚ್ಚಿದರು. ಸಿಕ್ಕಾಬಟ್ಟೆ ಕೆಲಸ ಮಾಡಿಸಿದರು. ಗುಲಾಮರನ್ನು ಕಾಣುವಂತೆ ಕಂಡರು. ಅವನೂ ಕೆಲವು ದಿನಗಳ ವರೆಗೆ ಯಾವ ವಿಚಾರವೂ ಇಲ್ಲದೆ ಕತ್ತೆಯಂತೆ ದುಡಿದನು; ಆ ಮೇಲೆ ಮೆಲ್ಲಮೆಲ್ಲನೆ ಅವನಿಗೆ ತನ್ನ ಊರಿನ ವಿಚಾರ ನೆನಪು ಬರತೊಡಗಿತು. ಅವನು ತನ್ನ ಅತ್ತೆಯನ್ನು ನೆನೆದು ಕಣ್ಣೀರು ಸುರಿಸಿದನು; ಬಾರ್ನಿಯ ನೆನಪು ಬಂದಾಗಲೆಲ್ಲ ಅವನ ಹೃದಯ ದುಃಖದಿಂದ ಕರಗಿ ನೀರಾಗುತ್ತಿತ್ತು. ಆಗ ತಾನು ಈ ಕಾಡುಜನರ ಎಡೆಯಿಂದ ತಪ್ಪಿಸಿಕೊಳ್ಳಬೇಕು; ತಪ್ಪಿಸಿಕೊಳ್ಳಬಹುದು, ಎಂದು ಖಂಡಿತ ಮಾಡಿದನು. "ದೇವರೇ ನನಗೆ ಸರಿಯಾದ ದಾರಿ ತೋರಿಸು" ಎಂದು ದೇವರನ್ನು ಬೇಡ ತೊಡಗಿದನು. ತಪ್ಪಿಸಿಕೊಳ್ಳಬೇಕು. ಹೇಗೆ ತಪ್ಪಿಸಿಕೊಳ್ಳುವುದು? ಎಂಬ ಯೋಚನೆ ಮಾತ್ರ ಇನ್ನೂ ಬರಲಿಲ್ಲ!

ತಾನು ಹೇಗಾದರೂ ತಪ್ಪಿಸಿಕೊಂಡು ಹೋಗಬೇಕೆಂದು

ನಿಶ್ಚಯ ಮಾಡಿದ ಮೇಲೆ, ಮಾರ್ಟಿನ್ ತನ್ನ ಉದಾಸೀನ ಭಾವವನ್ನು ದೂರಗೊಳಿಸಿ, ಆದಷ್ಟು ಸಂತೋಷದಲ್ಲಿ ಇರತೊಡಗಿದನು. ಅವನು ತನ್ನ ಕೆಲಸಕಾರ್ಯಗಳನ್ನು ಉತ್ಸಾಹದಿಂದ ಮಾಡತೊಡಗಿದನು; ನಗುನಗುತ್ತ ಮಾಡತೊಡಗಿದನು. ಅದರೊಂದಿಗೇ ತಪ್ಪಿಸಿಕೊಳ್ಳುವ ದಾರಿಯನ್ನೂ ಯೋಚಿಸತೊಡಗಿದನು. ಮಾರ್ಟಿನನ ಉತ್ಸಾಹವನ್ನು ಕಂಡು, ಕೆಲಸಮಾಡುವ ರೀತಿಯನ್ನು ನೋಡಿ ಆ ಕಾಡುಜನರಿಗೂ ಸಂತೋಷವಾಗಿತ್ತು. ಮಾರ್ಟಿನ್ ಆ ಕಾಡುಜನರಿಂದ ಊದುವ ಕೊಳವೆಯ ಮೂಲಕ ಬಾಣ ಬಿಡುವ ಕ್ರಮವನ್ನು ಕಲಿತುಕೊಂಡನು. ಅವರೊಂದಿಗೆ ಬೇಟೆಗೆ ಹೋಗಿ ಅವರ ಬೇಟೆಯ ರೀತಿಯನ್ನೂ ಕಲಿತನು. ಬ್ರೆಜಿಲಿನ ಕಾಡುಗಳಲ್ಲಿರುವ ಹಲವು ಚಿತ್ರವಿಚಿತ್ರ ಪ್ರಾಣಿ ಪಕ್ಷಿಗಳ ಪರಿಚಯವೂ ಅವನಿಗಾಯಿತು. ಅವನಿಗೆ ಆ ಜನರ ಭಾಷೆಯೂ ಅಲ್ಪಸ್ವಲ್ಪ ಬರತೊಡಗಿತು. ಆ ಕಾಡು ಜನರೂ ಅವನನ್ನು ಮೊದಲಿನಷ್ಟು ಕ್ರೂರರೀತಿಯಿಂದ ನಡೆಸಲಿಲ್ಲ. ಅಲ್ಪ ಸ್ವಲ್ಪ ದಯೆ ತೋರಿಸ ತೊಡಗಿದರು. ಎಷ್ಟಾದರೂ, ಏನಾದರೂ ಮಾರ್ಟಿನನ ಮೇಲಿನ ಸರ್ಪಕಾವಲು ಮಾತ್ರ ಸಡಿಲಾಗಲಿಲ್ಲ. ಕಾಡುಮನುಷ್ಯನೊಬ್ಬನು ಮಾತ್ರ ಅವನ ನೆರಳಿನಂತೆ ಹಿಂಬಾಲಿಸುತ್ತಿದ್ದನು.

ಬೇಟೆ, ಕುಡಿತ, ಕುಣಿತ, ಇವಲ್ಲದೆ ಈ ಜನರಿಗೆ ಬೇರೆ ಕೆಲಸವಿದ್ದಂತೆ ಮಾರ್ಟಿನನಿಗೆ ತೋರಲಿಲ್ಲ. ಒಂದು ದಿನ ಆ ಕಾಡು ಜನರೆಲ್ಲ ಒಟ್ಟುಕೂಡಿ ಒಂದು ದೊಡ್ಡ ಹಬ್ಬ ಮಾಡಿದರು. ಹೆಂಗುಸರೂ ಗಂಡಸರೂ ತಮ್ಮ ಮೈಗೆಲ್ಲ ಬಗೆಬಗೆಯ ಬಣ್ಣಗಳನ್ನು ಬಳಿದುಕೊಂಡರು. ಇದರಿಂದ ಅವರು ಮತ್ತಷ್ಟು ವಿಕಾರವಾಗಿ ಕಾಣಿಸಿಕೊಂಡರು. ತಿಂದು, ಕುಡಿದು ಕುಣಿಯ ತೊಡಗಿದರು. ಅವರ ಹಾಡು, ನರ್ತನ ಎಲ್ಲವೂ ಅವರ ಸ್ವಭಾವಕ್ಕೆ ತಕ್ಕುದಾಗಿಯೇ ಇತ್ತು. ಮಾರ್ಟಿನನಿಗೆ ಈ ಕಾಡು ಜೀವನವನ್ನು ನೋಡಿ ಕಾರ್ಲೊ ಪಾದ್ರಿಯ ಮಾತು ನೆನಪಾಯಿತು. "ಈ ಬ್ರೆಜಿ

ಲಿನ ಮೂಲನಿವಾಸಿಗಳಿಗೆ ಸತ್ಯ, ದೇವರು ಎಂಬ ವಿಷಯದ ಕೊರತೆಯಿದೆ. ಅದೊಂದಿದ್ದರೆ ಇನ್ನೇನೂ ಬೇಕಿದ್ದಿಲ್ಲ" ಎಂದು ಕಾರ್ಲೊ ಪಾದ್ರಿ ಹೇಳಿದ್ದನು.

ಒಂದು ದಿನ ಆ ಕಾಡು ಜನರು ತಿಂದು ಕುಡಿದು ಕುಣಿಯುತ್ತಿದ್ದರು. ಹಾಗೆ ಕುಣಿಯುತ್ತಿದ್ದಾಗ ಮಾರ್ಟಿನ್ ಬೇಸರವಾದಾಗ ತಾನು ಕುಳಿತುಕೊಳ್ಳುತ್ತಿದ್ದ ಬಾಳೆ ಬುಡಕ್ಕೆ ನಡೆದನು. ಆ ಬಾಳೆ ಹಿಂಡಿಲು ಈ ಜನರ ಗುಡಿಸಲುಗಳಿಂದ ಸುಮಾರು ಒಂದರ್ಧ ಮೈಲಷ್ಟು ದೂರದಲ್ಲಿ ಎತ್ತರವಾದ ಗುಡ್ಡದ ಮೇಲಿತ್ತು. ಆ ಬಾಳೆ ಹಿಂಡಿಲಿನ ಬಳಿ ಕುಳಿತು ಈಚೆ ನೋಡಿದರೆ ಕಾಡು ಜನರ ಹಳ್ಳಿ ಕಾಣುತ್ತಿತ್ತು. ಆಚೆ ನೋಡಿದರೆ ಆಳವಾದ ತಗ್ಗು ಪ್ರದೇಶವೂ, ಕಾಡೂ ಗೋಚರಿಸುತ್ತಿತ್ತು. ಅದೇಗುಡ್ಡದ ಬದಿಯಿಂದ ಒಂದು ಹಳ್ಳ ಹರಿದು ಬಂದು, ಅಲ್ಲೇ ಹತ್ತಾಳು ತಗ್ಗಿಗೆ ಜಲಪಾತವಾಗಿ ಬೀಳುತ್ತಿತ್ತು. ಬಾಳೆ ಹಿಂಡಿಲಿನ ಬಳಿ ಕುಳಿತರೆ ಆ ಜಲಪಾತವೂ ಸೊಗಸಾಗಿ ತೋರುತ್ತಿತ್ತು. ಆ ನೀರು ಮುಂದೆ ಏನಾಗುತ್ತಿತ್ತೆಂದು ಸುತ್ತಲು ಬೆಳೆದ ಕಾಡುಗಳಿಂದಾಗಿ ಗೋಚರಿಸುತ್ತಿರಲಿಲ್ಲ. ಆ ಬೆಟ್ಟದಿಂದ ಆಚೆ ಬಹುದೂರದ ವರೆಗೆ ಕಾಡೂ, ಮೈದಾನೂ ಇದೆ ಎಂದೂ, ಅದರಿಂದ ಆಚೆ ಜನರು ವಾಸಿಸುತ್ತಾರೆಂದೂ, ಅದರಿಂದಾಚೆ ದೊಡ್ಡ ನೀರಿನ ರಾಶಿಯಿದೆಯೆಂದೂ, ಲೋಕವು ಅಲ್ಲಿಗೆ ಮುಗಿಯುತ್ತದೆಂದೂ ಮಾರ್ಟಿನನಿಗೆ ಅವನ ಕಾವಲುಗಾರನು ಹೇಳಿದ್ದನು. ಸೂರ್ಯನು ಆ ಕಡೆ ಮೂಡುತ್ತಿದ್ದುದರಿಂದ ಅದು ಅಟ್ಲಾಂಟಿಕ್ ಸಮುದ್ರವಾಗಿರಬಹುದೆಂದೂ ಹಲವು ದಿನಗಳ ವರೆಗೆ ನಡೆದರೆ ತಾನು ಅಲ್ಲಿಗೆ ಹೋಗಬಹುದೆಂದೂ ಮಾರ್ಟಿನ್ ತಿಳಿದಿದ್ದನು.

ಈ ಸಲ ಮಾರ್ಟಿನ್ ಬಾಳೆಯ ಹಿಂಡಿಲ ಬಳಿ ಹೋದವನು ತುಸು ಹೊತ್ತು ಅಲ್ಲೇ ಕುಳಿತು ಮತ್ತೆ ಎದ್ದು ಆಚೆ ಈಚೆ ತಿರುಗ ತೊಡಗಿದನು. ಅವನ ಕಾವಲುಗಾರನೂ ದೂರ ನಿಂತು ಅವನ ಕಡೆಗೆ ದೃಷ್ಟಿ ಇಟ್ಟಿದ್ದನು. ಏನಾದರೂ ಉಪಾಯದಿಂದ

ಇವರ ಕೈಯಿಂದ ತಪ್ಪಿಸಿಕೊಳ್ಳಬೇಕೇ ಹೊರತು, ಇಲ್ಲವಾದರೆ ಸಾಧ್ಯವಾಗದೆಂದೂ ಮಾರ್ಟನನಿಗೆ ತಿಳಿದಿತ್ತು. ಅವನು ಹಾಗೆ ಅಲ್ಲಿ ಆ ಜಲಪಾತದ ಬಳಿ ಸುತ್ತು ಸುತ್ತು ಸುಳಿಯುತ್ತ ಒಮ್ಮೆ ಕೆಳಗೆ ನೋಡಿದನು. ನೀರು ಕೆಳಗೆ ಬೀಳುತ್ತಿದ್ದಲ್ಲಿಗೆ ಇಳಿದು ಹೋಗಲು ಎಲ್ಲಿಯೂ ದಾರಿಯಿದ್ದಂತೆ ಮಾರ್ಟನನಿಗೆ ಕಾಣಲಿಲ್ಲ. ಆದುದಾಗಲಿ, ಈ ನೀರಿಗೆ ಹಾರಿ ಈಜಿ ತಪ್ಪಿಸಿ ಕೊಳ್ಳುವುದು. ಅದೃಷ್ಟವಿದ್ದಂತಾಗುತ್ತದೆ. ಕಾವಲುಗಾರನು ನಾನು ನೀರಿಗೆ ಬಿದ್ದುದನ್ನು ನೋಡಿ, ನೀರಿಗೆ ಹಾರಿ ಸತ್ತನೆಂದೂ ತನ್ನ ಜನರಿಗೆ ಹೇಳಬಹುದು." ಎಂದು ಚಿಂತಿಸಿ, ಕೆಳಗೆ ಹಾರಿ ತಪ್ಪಿಸಿಕೊಳ್ಳಲು ನಿಶ್ಚಯಿಸಿದನು. ಹೀಗೆಲ್ಲಾ ಯೋಚಿಸಿ ಅವನು ಒಮ್ಮೆ ನಡುಗಿದನು. ಮರುಕ್ಷಣದಲ್ಲಿಯೇ ಈ ಜನರ ಗುಲಾಮನಾಗಿ ನರಳುವುದಕ್ಕಿಂತ ತಪ್ಪಿಸಿಕೊಳ್ಳುವ ಯತ್ನದಲ್ಲಿ ಸತ್ತುಹೋದರೂ ಚಿಂತೆಯಿಲ್ಲವೆಂದು ಯೋಚಿಸಿ, ಗುಡ್ಡದ ಬದಿಗೆ ಓಡಿ "ಅಯ್ಯೋ" ಎಂದು ಬೊಬ್ಬಿಟ್ಟು ಕೆಳಗೆ ಹಾರಿಯೇ ಬಿಟ್ಟನು. ಇದನ್ನು ಕಂಡು ಅವನ ಕಾವಲುಗಾರನು ಗಾಬರಿಗೊಂಡು ಅಲ್ಲಿಗೆ ಓಡಿ ಬಂದು ಕೆಳಗೆ ನೋಡಿದನು. ಕೆಳಗೆ ಬಹಳ ಆಳದಲ್ಲಿ ಮಾರ್ಟನ್ ನೀರಿನಲ್ಲಿ ಮುಳುಗಿ ಏಳುತ್ತ ಒದ್ದಾಡುತ್ತಿದ್ದನು. ನೀರಲ್ಲಿ ಮುಳುಗಿ ಏಳುತ್ತಿದ್ದ ಮಾರ್ಟನ್ ಒಂದೆರಡು ಮಿನಿಟುಗಳಲ್ಲಿ ಮಾಯವಾದನು. ಇದನ್ನು ಕಂಡು ಮೇಲೆ ನಿಂತು ನೋಡುತ್ತಿದ್ದ ಕಾವಲುಗಾರನು ಬೊಬ್ಬೆ ಹೊಡೆದುದೂ ಮಾರ್ಟನನಿಗೆ ಕೇಳಿಸಿತು. ಮಾರ್ಟನ್ ಆ ಸುಳಿ ನೀರಲ್ಲಿ ಒದ್ದಾಡಿ ಸಮೀಪದಲ್ಲಿದ್ದ ಬಂಡೆ ಕಲ್ಲನ್ನೇರಿ ಭದ್ರವಾಗಿ ಕುಳಿತಿದ್ದನು. ಸುತ್ತಲೂ ಕಾಡು ಪೊದೆ ಬೆಳೆದುದರಿಂದ ಮೇಲಿದ್ದ ಕಾವಲುಗಾರನಿಗೆ ಇದೊಂದೂ ಕಾಣಿಸುತ್ತಿರಲಿಲ್ಲ. ಮಾರ್ಟನನಿಗೆ ಮಾತ್ರ ಮೇಲಿನ ಕಾವಲುಗಾರನು ಕಾಣಿಸುತ್ತಿದ್ದನು.

ಕಾವಲುಗಾರನು ಹಳ್ಳಿಗೆ ಓಡಿ ಮಾರ್ಟನ್ ನೀರಿಗೆ ಬಿದ್ದು

ಸತ್ತನೆಂದು ಸುದ್ದಿ ತಿಳಿಸಿದನು. ಆ ಜನರೆಲ್ಲ ಗಾಬರಿಗೊಂಡು ಮಾರ್ಟಿನ್ ನೀರಿಗೆ ಹಾರಿದ್ದಲ್ಲಿಗೆ ಬಂದರು. ಎತ್ತರದ ಬೆಟ್ಟದ ಮೇಲೆ ನಿಂತು ನೀರಿನ ಆಳವನ್ನು ನೋಡಿ, ಮಾರ್ಟಿನ್ ಕೆಳಗೆ ಹಾರಿದುದನ್ನು ನೆನಪಿ ಹೆದರಿಕೆ ಆಶ್ಚರ್ಯಗಳಿಂದ ಮೂಗಿನ ಮೇಲೆ ಬೆರಳಿಟ್ಟರು!

## ಹದಿನೈದು

ಬ್ರೆಜಿಲಿನ ಕಾಡುಜನರ ಗುಲಾಮಗಿರಿಯಿಂದ ಬಿಡುಗಡೆ ಹೊಂದಿದ ಮಾರ್ಟಿನನಿಗೆ ಎಷ್ಟು ಸಂತೋಷವಾಗಿರಬಹುದೆಂದು ಇಲ್ಲಿ ಬೇರೆ ಹೇಳಬೇಕಾಗಿಲ್ಲ. ಸುಳಿ ನೀರಿನಿಂದ ಈಜಾಡಿ ಬಂಡೆಯನ್ನೇರಿದ ಮಾರ್ಟಿನ್ ಬಂಡೆಯ ಆಚೆ ಬದಿಯಿಂದ ಹೊಳೆಯ ದಡಕ್ಕೆ ಇಳಿದು, ತನ್ನ ಒದ್ದೆಯಾದ ಉಡುಪು ಕಳಚಿ, ನೀರು ಹಿಂಡಿ ಗಿಡಗಳ ಕೊಂಬೆಯಲ್ಲಿ ಆರಲು, ಹಾಕಿ, ಸುತ್ತಲಿನ ಪ್ರಕೃತಿ ಸೌಂದರ್ಯವನ್ನು ನೋಡುತ್ತ ಕುಳಿತನು.

ಆಗ ಅವನ ಮನಸ್ಸಿಗೆ ಮುಂದೇನೆಂಬ ಯೋಚನೆ ಹುಟ್ಟಿತು. ಆ ಕಾಡು ನಾಡಿನಲ್ಲಿ ಬರಿಕೈಯಲ್ಲಿ ಸಂಚರಿಸುವುದೂ ಅಪಾಯ, ಉಣ್ಣಲು ತಿನ್ನಲು ಆಹಾರವಿಲ್ಲ! ಕ್ರೂರ ಪ್ರಾಣಿಗಳಿಂದ, ಮನುಷ್ಯರಿಂದ ಪಾರಾಗಲು, ಬೇಟೆಯಾಡಲು ಆಯುಧಗಳೂ ಇಲ್ಲ! ಮಾಡುವುದೇನು? "ರಾತ್ರಿಯಾದ ಮೇಲೆ ಆ ಕಾಡುಜನರ ಹಳ್ಳಿಗೆ ನುಗ್ಗಿ ತನಗೆ ಬೇಕಾದುದನ್ನೆಲ್ಲ ಕದ್ದು ತರುವುದು ಇದು ಬಹಳ ಅಪಾಯದ ಕೆಲಸ. ಆದರೆ ಆ ದಿನ ಆ ಕಾಡು ಜನರು ತಿಂದು ಕುಣಿದು ದಣಿದಿರುವುದರಿಂದ ಅಲ್ಲಲ್ಲಿ ಬಿದ್ದುಕೊಂಡು ಗೊರಕೆ ಹೊಡಿಯುತ್ತಿರಬಹುದು. ಏನೇ ಆಗಲಿ ಅಲ್ಲಿಗೆ ಹೋಗಿ ತನಗೆ ಬೇಕಾದ ಸಾಮಾನುಗಳನ್ನು ತರುವುದೆಂದೇ ಖಂಡಿತ ಮಾಡಿದನು. ಹಾಗೆಯೇ ಅಲ್ಲಿಂದ ಹೊರಟು, ಕತ್ತಲು ಕತ್ತಲಾಗುವಾಗ ಕಾಡು ಜನರ ಗುಡಿಸಲ ಬಳಿ ಸೇರಿದನು.

ಸುಮಾರು ಮಧ್ಯರಾತ್ರಿ ಕಳೆಯುವ ವರೆಗೆ ಮಾರ್ಟಿನ್ ಒಂದು ಪೊದರ ಎಡೆಯಲ್ಲಿ ಅಡಗಿ ಕುಳಿತನು. ಗುಡಿಸಲುಗಳಲ್ಲಿದ್ದ ಕಾಡುಜನರೆಲ್ಲ ಮಲಗಿ ನಿದ್ದೆಹೋದರೆಂದು ತಿಳಿದ ಮೇಲೆ ಮಾರ್ಟಿನ್ ಮೆಲ್ಲಗೆ ತನ್ನ ಗುಡಿಸಲಿಗೆ ನುಗ್ಗಿದನು. ಬಹಳ ಜಾಗ್ರತೆಯಿಂದ ತನಗೆ ಬೇಕಾದುದನ್ನೆಲ್ಲ ತೆಗೆದುಗೊಂಡನು. ಚಕಮುಕಿ ಕಲ್ಲು, ಬಾಣ, ಊದುವ ಕೊಳವೆ, ಕತ್ತಿ, ಕೊಡಲಿ, ಮಲಗುವ ಉಯ್ಯಾಲೆ, ಒಂದು ಟೊಪ್ಪಿ, ಒಂದು ಚೀಲ ಹಿಟ್ಟು ಇಷ್ಟನ್ನೆಲ್ಲ ಎತ್ತಿಕೊಂಡು ಗುಡಿಸಲಿನಿಂದ ಹೊರಬಿದ್ದನು. ಮಾರ್ಟಿನ್ ಗುಡಿಸಲಿನಿಂದ ಹೊರಟನೆನ್ನುವಾಗ ಅಲ್ಲೇ ಒಬ್ಬ ಕ್ರೂರ ಮನುಷ್ಯನು ನಿಂತು ಮಾರ್ಟಿನನನ್ನೇ ನೋಡುತ್ತಿದ್ದನು. ಮಾರ್ಟಿನನಿಗೂ ಅವನ ಗುರುತ್ತಿತ್ತು. ಆಗ ತಾನು ಸಿಕ್ಕಿಬಿದ್ದಂತೆಯೋ ಎಂದು ಮಾರ್ಟಿನ್ ನಡುಗಿದನು. ಆದುದಾಗಲೆಂದು ಆದಷ್ಟು ಬೇಗನೇ ಅಲ್ಲಿಂದ ಜಾರಿದನು. ಆ ಕ್ರೂರಮನುಷ್ಯನು ಮಾತ್ರ ಮಾರ್ಟಿನನನ್ನು ನೋಡಿಯೂ ಚಕಾರ ಶಬ್ದವನ್ನೆತ್ತಲಿಲ್ಲ. ಆ ಕಾಡುಮನುಷ್ಯನು ಮಾರ್ಟಿನನನ್ನು ನಿಜವಾದ ಮಾರ್ಟಿನನೆಂದು ನಂಬದೆ, ಅದು ಸತ್ತು ಹೋದ ಮಾರ್ಟಿನನ ಪಿಶಾಚಿಯೆಂದೂ, ತನ್ನ ಪರಲೋಕ ಪ್ರಯಾಣಕ್ಕೆ ಬೇಕಾದ ಸಾಮಾನುಗಳನ್ನು ಕೊಂಡು ಹೋಗಲು ಬಂದಿರಬೇಕೆಂದೂ ಯೋಚಿಸಿದ್ದನು.

ಗುಡಿಸಲಿಂದ ಬೇಕಾದ ಸಾಮಾನುಗಳನ್ನು ತೆಗೆದುಕೊಂಡ ಮಾರ್ಟಿನ್ ಆ ರಾತ್ರಿಯೆಲ್ಲ ತನಗೆ ಸಾಧ್ಯವಾದಷ್ಟು ದೂರ ನಡೆದನು. ಮಾರ್ಟಿನ್ ಆ ಕಾಡಿನಲ್ಲಿ ಮೂಡು ದಿಕ್ಕನ್ನೇ ಗುರಿಯಾಗಿಟ್ಟು ಮುಂದುವರಿಯುತ್ತಿದ್ದನು. ರಾತ್ರಿಯಾದೊಡನೆಯೇ ಬೆಂಕಿ ಉರಿಸಿ, ಮಲಗು ತೊಟ್ಟಿಲನ್ನು ಮರದ ಕೊಂಬೆಗಳಿಗೆ ಕಟ್ಟಿ ಮಲಗಿಕೊಳ್ಳುತ್ತಿದ್ದನು. ಹಗಲು ಕಾಡಿನ ಅಂದ ಚಂದಗಳನ್ನು ನೋಡುತ್ತ, ಬೇಟೆಯಾಡುತ್ತಿದ್ದನು. ಯಾವುದಾದರೂ ಊರು ಸೇರಬೇಕೆಂಬ ಆಸೆಯಿಂದ ಹೊರಟ ಅವನಿಗೆ, ಕಾಡು ಜನರ ಸೆರೆ

ಯಿಂದ ಬಿಡುಗಡೆ ಹೊಂದಿದ ಆವನಿಗೆ, ಆಯಾಸವೆಂಬುದೇ ತೋರಲಿಲ್ಲ. ಆ ಕಾಡುದಾರಿಯಲ್ಲಿ ಸಂತಸವನ್ನೀಯುವ ಎಷ್ಟೋ ದೃಷ್ಯಗಳಿದ್ದುವು.

ಒಂದು ದಿನ ಸಂಜೆ ಮಾರ್ಟಿನ್ ಒಂದು ದೊಡ್ಡ ಕೊಳದ ತೀರದಲ್ಲಿ ಒಂದು ಮರದ ಮೇಲೆ ವಿಶ್ರಾಂತಿ ಪಡೆಯುತ್ತಿದ್ದನು. ಆಗ ಆ ಕೊಳಕ್ಕೆ ನೀರು ಕುಡಿಯಲು ಬಂದ ಹುಲಿಯನ್ನು ನೀರಲ್ಲಿದ್ದ ನೆಗಳೆ ಹಿಡಿದುಬಿಟ್ಟಿತು. ಆ ಹುಲಿಗೂ, ನೆಗಳೆಗೂ, ಎಷ್ಟೋ ಹೊತ್ತಿನ ವರೆಗೆ ಭಯಂಕರವಾದ ಹೋರಾಟ ನಡೆದು ಕಡೆಗೆ ಹುಲಿ ಸತ್ತು ಬಿದ್ದಿತು. ಎರಡು ಕ್ರೂರ ಪ್ರಾಣಿಗಳು ಈ ರೀತಿ ಭಯಂಕರವಾಗಿ ಹೋರಾಡಿದುದನ್ನು ಆವನು ಆ ಮೊದಲು ಎಂದೂ ಕಂಡಿರಲಿಲ್ಲ. ಇನ್ನೊಂದು ದಿನ ಟಾಪಿರ್ ಎಂಬ ಒಂದು ದೊಡ್ಡ ಪ್ರಾಣಿಯನ್ನು ಮಾರ್ಟಿನ್ ಎದುರಿಸಿದನು. ಸುಮಾರು ಆರು ಅಡಿ ಉದ್ದ ನಾಲ್ಕು ಅಡಿ ಎತ್ತರದ ಆ ಪ್ರಾಣಿಯನ್ನು ಕಂಡು ಮಾರ್ಟಿನ್ ತುಸು ಹೆದರಿ ತಪ್ಪಿಸಿಕೊಂಡು ಹೋಗಲು ಕಾಲು ತೆಗೆದನು. ಆಗ ಆ ಪ್ರಾಣಿ ಮಾರ್ಟಿನನ ಮೇಲೆ ಬೀಳುವ ಬದಲಾಗಿ ತಾನೇ ಹೆದರಿ ಓಡತೊಡಗಿತು. ಟಾಪಿರ್ ಯಾವಾಗಲೂ ಇತರರು ತನ್ನನ್ನು ಎದುರಿಸಿದರೆ ಆದಷ್ಟು ತಪ್ಪಿಸಿಕೊಳ್ಳುವ ಪ್ರಾಣಿ ಎಂದು ಮಾರ್ಟಿನನಿಗೆ ಆಗ ತಿಳಿಯಿತು.

ಮಾರ್ಟಿನ್ ಹಾಗೆಯೇ ಮುಂದುವರಿಯುತ್ತಿದ್ದಾಗ ನೋಟಕ್ಕೆ ಅತಿ ಭಯಂಕರವಾದ ಆದರೆ, ಸ್ವಭಾವದಲ್ಲಿ ಸಾಧುವಾದ ಇನ್ನೊಂದು ಪ್ರಾಣಿಯನ್ನು ಕಂಡನು. ಆ ಪ್ರಾಣಿಯ ಹೆಸರು "ಇರುವೆ ಮುಕ್ಕ" ಎಂದರೆ ಇರುವೆ ತಿನ್ನುವ ಪ್ರಾಣಿ ಎಂದರ್ಥ. ಆ ಪ್ರಾಣಿ ಇರುವೆಗಳ ಹುತ್ತ ಎಲ್ಲಿದೆಯೆಂದು ಮೂಸಿ, ಗಾಳಿಯಿಂದಲೇ ತಿಳಿದು, ತನ್ನ ಹರಿತವಾದ ಉಗುರುಗಳಿಂದ ಹುತ್ತವನ್ನು ಕೆದರಿ ತೂತು ಮಾಡಿ ತನ್ನ ಉದ್ದವಾದ ನಾಲಗೆಯನ್ನು ಆ ತೂತಿನೊಳಗೆ ಹೊಗಿಸಿ ಸುಮ್ಮಗೆ ಇದ್ದು ಬಿಡುತ್ತದೆ. ಆಗ

ಹುತ್ತದೊಳಗಿದ್ದ ಇರುವೆಗಳೆಲ್ಲ ನಾಲಗೆಗೆ ಮುತ್ತಿಕೊಂಡ ಮೇಲೆ ನಾಲಗೆಯನ್ನು ಒಳಗೆಳೆದು ಇರುವೆಗಳನ್ನೆಲ್ಲ ತಿಂದು ಮುಗಿಸುತ್ತದೆ. ಮಾರ್ಟಿನ್ ಎಷ್ಟೋ ಹೊತ್ತಿನ ವರೆಗೆ ಈ ತಮಾಷೆಯನ್ನು ನೋಡಿ ಮುಂದುವರಿದನು.

ಮಾರ್ಟಿನ್ ಕಾಡಿನಲ್ಲಿ ಒಂಟಿಯಾಗಿ ಮುಂದುವರಿಯುತ್ತಿದ್ದಾಗ ಒಮ್ಮೆ ಮನುಷ್ಯರ ಮಾತು ಅವನ ಕಿವಿಗೆ ಬಿತ್ತು! ಯಾರೋ ಮನುಷ್ಯರು! ಯಾರೆಂದು ನೋಡುವ ಎಂದು ಪೊದರ ಎಡೆಯಲ್ಲಿ ಕುಳಿತು ಆ ಸ್ವರ ಬರುತ್ತಿದ್ದ ಕಡೆಗೆ ನೋಡಿದನು. ತುಸು ಹೊತ್ತಿನಲ್ಲಿ ಹೊರೆ ಹೊತ್ತ ಎಂಟು ಹತ್ತು ಹೇಸರ ಕತ್ತೆಗಳೂ, ಆರು ಮಂದಿ ಕುದುರೆ ಸವಾರರೂ ಹಲವು ಮಂದಿ ನೀಗ್ರೋಗಳೂ ಕಾಣಿಸಿಕೊಂಡರು. ಆ ಸವಾರರ ಉಡುಪಿನಿಂದ, ಆಕಾರದಿಂದ ಅವರು ಬ್ರೆಜಿಲ್ ದೇಶದವರೆಂಬುದು ಮಾರ್ಟಿನನಿಗೆ ತಿಳಿಯಿತು. ಅವರು ಮುಂದುವರಿಯುತ್ತಿದ್ದಂತೆ ಮಾರ್ಟಿನ್ "ಯಾರದು? ದಯ ಮಾಡಿ ನಿಲ್ಲಿ, ದಯಮಾಡಿ ನಿಲ್ಲಿ" ಎಂದು ಕೂಗಿದನು. ಆ ಸ್ವರ ಕೇಳಿ ಆರು ಮಂದಿ ಸವಾರರೂ ಮಾರ್ಟಿನನ ಕಡೆಗೆ ತಿರುಗಿದರು. ಬಳಿಗೆ ಬಂದ ಯುವಕ ಮಾರ್ಟಿನನೊಡನೆ ಪೋರ್ತುಗೀಸ್ ಭಾಷೆಯಲ್ಲಿ ಮಾತನಾಡಿದರು. ಮಾರ್ಟಿನನಿಗೆ ಪೋರ್ತುಗೀಸ ಭಾಷೆ ಸರಿಯಾಗಿ ತಿಳಿಯದು. ಮಾರ್ಟಿನ್ ತನಗೆ ಆ ಭಾಷೆ ಸರಿಯಾಗಿ ಬಾರದೆಂದೂ ಇಂಗ್ಲಿಷ್ ಚೆನ್ನಾಗಿ ಬರುತ್ತದೆಂದೂ ಅವರಿಗೆ ತಿಳಿಸಿದನು. ಆ ಸವಾರರಲ್ಲಿ ಒಬ್ಬನಿಗೆ ಹರಕು ಮುರುಕು ಇಂಗ್ಲಿಷ್ ಬರುತ್ತಿತ್ತು. ಅವನು ಮಾರ್ಟಿನನ ವಿಚಾರವನ್ನೆಲ್ಲ ಕೇಳಿ, ತನ್ನ ಬಳಿಯಲ್ಲಿದ್ದವರಿಗೆ ತಿಳಿಸಿದನು. ತಾನು ಬ್ರೆಜಿಲಿನ ಕಾಡುವಾಸಿಗಳಾದ ರೆಡ್ ಇಂಡಿಯನರ ಸೆರೆಯಾಳಾಗಿ ಬಿಡುಗಡೆ ಹೊಂದಿ ಬಂದಲ್ಲಿನ ವರೆಗಿನ ವೃತ್ತಾಂತವನ್ನು ಸಂಕ್ಷೇಪವಾಗಿ ತಿಳಿಸಿದನು. ತನಗೆ ಸಮುದ್ರ ತೀರಕ್ಕೆ ಇಲ್ಲವೇ ಯಾವುದಾದರೂ ಒಂದು ಪಟ್ಟಣಕ್ಕೆ ಹೋಗಬೇಕೆಂದೂ , ಅಲ್ಲಿಂದ

ತಾನು ತನ್ನ ಊರಿಗೆ ಹಿಂದಿರುಗಬಹುದೆಂಬ ಆಸೆಯಿದೆಯೆಂದೂ ಹೇಳಿದನು.

ಮಾರ್ಟಿನನ ಕತೆಯನ್ನು ಮೌನವಾಗಿ ಕೇಳಿದ ಆ ಸವಾರರು "ಓಹೊ!" ಎಂದು ನಿಟ್ಟುಸಿರು ಬಿಟ್ಟು "ನೀನೀಗ ನಮ್ಮೊಡನೆ ಬಾ! ನಾವು ವಜ್ರದ ಗನಿಗೆ ಹೋಗುವವರು. ಅಲ್ಲಿ ನಿನಗೆ ಕೆಲಸ ಸಿಗಬಹುದು. ಆ ಕುದುರೆಯನ್ನು ಏರು" ಎಂದು ಹೇಳಿದರು. ಆ ಸವಾರರ ಬಳಿ ಒಂದು ಕುದುರೆ ಹೆಚ್ಚಿಗೆಯಿತ್ತು. ನೀಗ್ರೋ ಒಬ್ಬನು ಅದನ್ನು ನಡೆಸುತ್ತಿದ್ದನು. ಮಾರ್ಟಿನ್ ಆ ಕುದುರೆಯನ್ನೇರಿ ಆ ಸವಾರರೊಡನೆಯೇ ನಡೆದನು. ದಾರಿ ನಡೆಯುತ್ತ ಇಂಗ್ಲಿಷ್ ಬಲ್ಲ ಸವಾರನು ಮಾರ್ಟಿನನೊಡನೆ, ನಾಳೆ ಸಂಜೆಯು ವೇಳೆಗೆ ತಾವು ವಜ್ರದ ಗನಿಗಳನ್ನು ತಲಪುವೆವೆಂದೂ, ಅಲ್ಲಿನ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುವ ಪಾರುಪತ್ಯಗಾರನಿಗೆ ಚೆನ್ನಾಗಿ ಇಂಗ್ಲಿಷ್ ಬರುತ್ತದೆಂದೂ, ಫಗೋನಿ ಎಂದು ಅವನ ಹೆಸರೆಂದೂ ತಿಳಿಸಿದನು. ಮಾರ್ಟಿನ್ ತಾನು ಕಾಡು ಜನರೊಡನೆ ಕಳೆದ ಕಷ್ಟದ ದಿನಗಳನ್ನು ವರ್ಣಿಸುತ್ತ ದಾರಿ ಸಾಗಿದನು.

ಮರುದಿನ ಸಂಜೆಯು ವೇಳೆಗೆ ಮಾರ್ಟಿನನೂ ಆ ಸವಾರರೂ ವಜ್ರದ ಗನಿಗಳಿಗೆ ತಲಪಿದರು. ಸವಾರರು ಪಾರುಪತ್ಯಗಾರ ಫಗೋನಿಯ ಮನೆಗೆ ಮಾರ್ಟಿನನನ್ನು ಕರಕೊಂಡು ಹೋಗಿ ಪರಿಚಯಮಾಡಿಕೊಟ್ಟರು.

ಪಾರುಪತ್ಯಗಾರ ಫಗೋನಿ ದೊಡ್ಡ ಆಳು, ಶಕ್ತಿಶಾಲಿ, ಉದ್ದವಾಗಿ ಕೆಂಪಾದ ಗಡ್ಡ ಮೀಸೆಗಳನ್ನು ಬೆಳೆಸಿದ್ದರಿಂದ ಅವನ ಮೋರೆ ಗಂಭೀರವಾಗಿ ಕಾಣುತ್ತಿತ್ತು. ಅವನ ಮೋರೆಯಲ್ಲಿ ನಗುವಿನ ಸುಳಿವು ಕೂಡ ಇರಲ್ಲಿಲ್ಲ. ಅವನ ಮಾತೂ ಅಷ್ಟೇ! ಅದರಲ್ಲಿ ನಯವೆಂಬುದೇ ಇರಲಿಲ್ಲ. ಸವಾರರು ಮಾರ್ಟಿನನ ಪರಿಚಯ ಮಾಡಿಕೊಟ್ಟಾಗ "ಚೆನ್ನಾಯಿತು, ಕುಳಿತುಕೋ" ಎಂದು ಇಷ್ಟೇ ಹೇಳಿ, ಆ ಸವಾರರೊಡನೆ ಏನೋ ನಾಲ್ಕು ಮಾತನಾಡಿ, "ಈ

ಕಳ್ಳನನ್ನು ಕೋಣೆ ಒಳಗೆ ಹಾಕಿ ಬಂದು ಮಾಡಿ" ಎಂದು ಅಪ್ಪಣೆ ಕೊಟ್ಟನು.

ಆ ಸವಾರರಲ್ಲಿ ಇಂಗ್ಲಿಷ್ ಬಲ್ಲ ಸವಾರನು ಮಾರ್ಟಿನನ ಬಳಿಗೆ ಬಂದು "ನೀನು ವಜ್ರ ಕದಿಯಲಿಕ್ಕಾಗಿ ಬಂದ ಕಳ್ಳನಂತೆ, ನಿನ್ನನ್ನು ಸೆರಮನೆಯಲ್ಲಿಡಲು ಅಪ್ಪಣೆಯಾಗಿದೆ" ಎಂದು ಹೇಳಿ, ಮಾರ್ಟಿನನನ್ನು ಒಂದು ಕತ್ತಲೆ ಕೋಣೆಯಲ್ಲಿ ಹಾಕಿ ಬೀಗ ಹಾಕಿ ಬಿಟ್ಟನು. ಸುಮಾರು ಎರಡು ಗಂಟೆಯ ಹೊತ್ತು ಕಳೆಯಿತು, ಮಾರ್ಟಿನ್ ಸೆರೆಯಾಗಿದ್ದ ಕೋಣೆಯ ಬಾಗಿಲು ತೆರೆಯಿತು. ಒಬ್ಬ ನೀಗ್ರೋ ಉರಿಯುತ್ತಿದ್ದ ಮೇಣದ ಬತ್ತಿಗಳನ್ನೂ ಊಟದ ತಟ್ಟೆಗಳನ್ನೂ ತಂದು ಮೇಜಿನ ಮೇಲಿರಿಸಿ ಬಾಗಿಲು ಹಾಕಿ ಹೋದನು. ಊಟದ ಗಮಗಮ ಪರಿಮಳ ಮಾರ್ಟಿನನ ಮೂಗನ್ನು ಅರಳಿಸಿತು. ತಾನೆಲ್ಲಿಯಾದರೂ ಕನಸು ಕಾಣುತ್ತಿಲ್ಲವಷ್ಟೆ! ಎಂದು ಮಾರ್ಟಿನ್ ಕಣ್ಣುಬಿಟ್ಟು ಅದನ್ನೆಲ್ಲ ನೋಡಿದನು. ಕನಸಲ್ಲ, ನೆನಸೆಂದಾಯಿತು. ಅಷ್ಟರಲ್ಲಿ ಇನ್ನೊಮ್ಮೆ ಬಾಗಿಲು ತೆರೆಯಿತು. ಫಗೊನಿ ಕೋಣೆಯೊಳಗೆ ಬಂದು ಒಳಗಿಂದ ಬೀಗ ಹಾಕಿ, ಬೀಗದ ಕೈಯನ್ನು ಕಿಸೆಯಲ್ಲಿ ತುರುಕಿಕೊಂಡನು. ಅವನು ಮಾರ್ಟಿನನ ಹತ್ತಿರ ಬಂದು ನಿಂತು ಮಾರ್ಟಿನನನ್ನೇ ಕ್ಷಣ ಹೊತ್ತು ಎವೆಯಿಕ್ಕದೆ ನೋಡಿದನು. ಮಾರ್ಟಿನನಿಗೆ ಇದೆಲ್ಲಾ ಏನೆಂದು ತಿಳಿಯದು. ಅವನು "ಅಯ್ಯೋ! ಬಡ ಕೈದಿಯೊಡನೆ ಇದೇನು ತಮಾಷೆ!" ಎಂದು ಕೇಳುತ್ತ ಎದ್ದು ನಿಂತನು. "ತಮಾಷೆ! ತಮಾಷೆಯಲ್ಲದೆ ಮತ್ತೇನು?" ಎನ್ನುತ್ತಾ ಫಗೊನಿ "ಮಾರ್ಟಿನ್ ನನ್ನ ಗೆಳೆಯ ಮಾರ್ಟಿನ್" ಎಂದು ಮಾರ್ಟಿನನನ್ನು ಗಟ್ಟಿಯಾಗಿ ಅಪ್ಪಿಕೊಂಡನು. "ನಿನಗಾಗಿ ನಾನೆಷ್ಟು ತಪಿಸಿದೆ ಗೊತ್ತೇ? ಎನ್ನುತ್ತ ತಲೆಯ ಮೇಲಿನ ಹೇಟನ್ನು ಆಚೆಗೆ ಒಗೆದು "ಹಹಾ!" ಎಂದು ನೆಗಾಡಿದನು. ಅವನಾರು? ಮಾರ್ಟಿನನ ಮುಂದೆ ನಿಂತ ಮನುಷ್ಯ! ಅವನು ಫಗೊನಿ ಅಲ್ಲ! ಬಾರ್ನಿ! ಮಾರ್ಟಿನನ ಜೀವದ ಗೆಳೆಯ ಬಾರ್ನಿ! ಆಗ ಅವರಿಗಾದ ಆನಂದ

ವನ್ನು ಹೇಳಲು ಸಾಧ್ಯವಿಲ್ಲ. ಅವರು ನಕ್ಕರು, ನಲಿದರು, ಅತ್ತರು, ಆಡಿದರು. ಉದ್ವೇಗ ಕಡಮೆಯಾದ ಮೇಲೆ ಇಬ್ಬರೂ ಊಟಕ್ಕೆ ಕುಳಿತರು. ಊಟ ಮಾಡುತ್ತಿದ್ದಾಗ ಮಾರ್ಟಿನ್ ತಾನು ತಪ್ಪಿಸಿ ಕೊಂಡು ಬಂದ ಕತೆಯನ್ನೆಲ್ಲ ಹೇಳಿದನು.

ಮಾರ್ಟಿನನ ಕಥೆ ಮುಗಿದೊಡನೆ, ಬಾರ್ನಿ ತಾನು ಮಾರ್ಟಿನ ನಿಂದ ಬೇರಾದ ಮೇಲೆ ನಡೆದ ವೃತ್ತಾಂತವನ್ನೆಲ್ಲ ವಿವರಿಸಿದನು. ಅದು ಹೀಗಿದೆ:—"ನಾನು ಆ ಕಾಡುಜನರಿಂದ ತಪ್ಪಿಸಿಕೊಳ್ಳಲೆಂದು ತುಂಬಾ ಹೋರಾಡಿದೆ ಪ್ರಯೋಜನವಾಗಲಿಲ್ಲ. ಅವರು ಅವರ ಹಳ್ಳಿಗೆ ನನ್ನನ್ನು ಕೊಂಡು ಹೋಗಿ ನನ್ನ ಕೈಕಾಲು ಕಟ್ಟಿ ಒಂದು ಗುಡಿಸಲಲ್ಲಿ ಹಾಕಿ ಬಿಟ್ಟರು. ಒಂದು ಮುದುಕಿ ನನಗೆ ಆಹಾರ ತಂದು ಕೊಡುತ್ತಿದ್ದಳು. ಕಾಲುಗಳನ್ನು ಬಲವಾಗಿ ಹಗ್ಗಗಳಿಂದ ಕಟ್ಟಿ ಹಾಕಿದುದರಿಂದ ನನಗೆ ಅವುಗಳನ್ನು ಬಿಡಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ನಾನು ಅಲ್ಲಿ ಕೈದಿಯಾಗಿ ಮೂರು ನಾಲ್ಕು ದಿನ ಗಳೊಳಗೆ ನನಗೆ ಆಹಾರ ತಂದುಕೊಡುತ್ತಿದ್ದ ಮುದುಕಿಯೊಡನೆ ಗೆಳೆತನ ಮಾಡಿದೆ. ಆಕೆ ನನ್ನನ್ನು ದಯೆಯಿಂದ ನೋಡ ತೊಡಗಿ ದಳು. ಮೂರು ವಾರ ಕಳೆದಾಗ ಆ ಮುದುಕಿ ನನಗೊಂದು ಚೂರಿ ತಂದು ಕೊಟ್ಟಳು. ನಾನು ಆ ಚೂರಿಯ ಸಹಾಯದಿಂದ ನನ್ನ ಕಟ್ಟುಗಳನ್ನೆಲ್ಲ ಕಡಿದೆನು. ನನ್ನನ್ನು ಅವರು ಒಂದು ಗುಡಿ ಸಲಿನ ಅಟ್ಟದ ಮೇಲೆ ಸೆರೆಯಲ್ಲಿ ಇರಿಸಿ ಸುತ್ತಲೂ ಬಂದು ಮಾಡಿ ದ್ದರು. ನಾನು ಕಟ್ಟು ಬಿಡಿಸಿ, ನನ್ನ ಸೆರೆಮನೆಯ ಬಾಗಿಲನ್ನು ದೂಡಿ ಎಳೆದು ಹೇಗೂ ತೆರೆದು ಕೆಳಗೆ ಹಾರಿ ಒಂದೇ ಸವನೆ ಓಡ ತೊಡಗಿದೆನು. ಅಲ್ಲೇ ಸಮೀಪದಲ್ಲಿ ಒಂದು ಹೊಳೆಯಿದೆಯೆಂದು ಮುದುಕಿಯ ಬಾಯಿಂದ ಕೇಳಿದ್ದೆ. ನಾನು ಆ ಹೊಳೆಯ ಕಡೆ ಓಡಿದೆ. ನಾನು ತಪ್ಪಿಸಿಕೊಂಡುದು ಆ ಕಾಡು ಜನರಿಗೆ ಗೊತ್ತಾಗಿ ಅವರು ನನ್ನ ಬೆನ್ನಟ್ಟಿ ಬಂದರು. ಅವರು ನನ್ನ ಬಳಿ ಸೇರುವುದರ ಮೊದಲು ನಾನು ಹೊಳೆಯ ದಡ ಸೇರಿ, ಅಲ್ಲೇ ಇದ್ದ ಒಂದು

ದೋಣಿಗೆ ಹಾರಿ, ದೋಣಿಯು ಹಗ್ಗ ಬಿಚ್ಚಿ ದೂಡಿ ಬಿಟ್ಟೆ. ಅಷ್ಟರಲ್ಲಿ ಕಾಡುಜನರಲ್ಲಿ ಕೆಲವರು ಬಂದು ಹೊಳೆಯ ನೀರಿಗೆ ಹಾರಿ ನನ್ನೆಡೆಗೆ ಈಜಾಡ ತೊಡಗಿದರು. ಆದರೆ ನಾನು ಸಿಕ್ಕ ಬೇಕೇ? ಹೊಳೆಯ ನೀರು ರಭಸದಿಂದ ಹರಿಯುತ್ತಿದುದರಿಂದ ನನ್ನ ದೋಣಿ ಅತಿ ವೇಗವಾಗಿ ಮುಂದುವರಿಯಿತು. ಮರುದಿನ ಜಾವಹೊತ್ತಿಗೆ ಇಂಡಿಯಾ ರಬ್ಬರು ತುಂಬಿದ ಒಂದು ದೋಣಿ ಸಿಕ್ಕಿತು. ಆ ದೋಣಿಯಲ್ಲಿ ನಾಲ್ಕು ಮಂದಿ ಇದ್ದರು. ನಾನು ಆದಷ್ಟು ಬೇಗನೇ ಅವರ ಕಡೆಗೆ ದೋಣಿ ನಡೆಸಿದೆ. ಅವರು ನನ್ನ ಸ್ಥಿತಿಯನ್ನು ನೋಡಿ, ಅವಸ್ಥೆಯನ್ನು ಕೇಳಿ ಕನಿಕರಗೊಂಡು, ನನ್ನನ್ನು ಅವರ ದೋಣಿಗೆ ಕರೆಸಿಕೊಂಡು, ಉಣ್ಣಲಿಕ್ಕೆ ತಿನ್ನಲಿಕ್ಕೆ ಕೊಟ್ಟು ವಿಶ್ರಾಂತಿ ಪಡೆಯಲು ಹೇಳಿದರು. ಆ ದೋಣಿ ಮೂರು ವಾರದ ವರೆಗೆ ಮುಂದುವರಿದು, ಒಂದು ಸಣ್ಣ ಪಟ್ಟಣವನ್ನು ಸೇರಿತು. ಅಲ್ಲಿ ನಾನು ಒಂದು ಪೇಟೆಯ ಅಂಗಡಿಯಲ್ಲಿ ಕೆಲಸಕ್ಕೆ ನಿಂತೆನು. ನನಗೆ ಆ ಕೆಲಸ ರುಚಿಸಲಿಲ್ಲ. ವಜ್ರದ ಗನಿಗಳೆಡೆಗೆ ಹೋಗಬೇಕೆಂಬ ಆಸೆ ಇನ್ನೂ ಇತ್ತು. ಹಾಗೆಯೇ ಆ ಪಟ್ಟಣದ ದಾರಿಯಾಗಿ ವಜ್ರದ ಗನಿಗಳ ಕಡೆಗೆ ಹೋಗುತ್ತಿದ್ದ ವ್ಯಾಪಾರಿ ಗಳೊಡನೆ ಕೆಲಸಕ್ಕೆ ನಿಂತು, ವಜ್ರದ ಗನಿಗೆ ಮುಂದುವರಿದೆನು.

ನಾಲ್ಕು ತಿಂಗಳ ಹಿಂದೆ ನಾಸಿಲ್ಲಿ ಬಂದಾಗ ಇಲ್ಲಿನ ಗನಿಗಳ ಯಜಮಾನ ನಮ್ಮ ದೇಶದವನೇ ಆಗಿದ್ದನು. ಅವನು ನನ್ನನ್ನು ಬಹಳ ಪ್ರೀತಿಯಿಂದ ಕಂಡನು. ಅವನ ಅಪೇಕ್ಷೆಯಂತೆ ನಾನು ಹೆಸರು ಬದಲಾಯಿಸಿಕೊಂಡೆನು; ಗಡ್ಡ ಬೆಳೆಸಿದೆನು. ಒಂದೆರಡು ತಿಂಗಳಲ್ಲಿ ಅಲ್ಪ ಸ್ವಲ್ಪ ಪೋರ್ತುಗೀಸ್ ಭಾಷೆಯನ್ನು ಕಲಿತು ಕೊಂಡೆನು. ಆಗ ನನ್ನ ಯಜಮಾನನು ನನ್ನನ್ನು ಈ ಗನಿಗಳ ಪಾರುಪತ್ಯಗಾರನನ್ನಾಗಿ ನೇಮಿಸಿ, ಬ್ರೆಜಿಲಿನ ಮುಖ್ಯಪಟ್ಟಣವಾದ ರಿಯೋಡಿಜನೆರಿಯೋವಿಗೆ ನಡೆದನು. ಅವನು ಅಲ್ಲೇ ವಾಸ್ತವ್ಯ ಮಾಡಿದ್ದಾನೆ. ಅವನು ತನ್ನ ಲಾಭದಲ್ಲಿ ತುಂಬಾ ಪಾಲನ್ನು

ನನಗೆ ಕೊಡುವೆನೆಂದು ಹೇಳಿದ್ದನು." ಎಂದನು ಬಾರ್ನಿ.

ಮರುದಿನ ಬೆಳಗ್ಗೆ ಬಾರ್ನಿ ಮಾರ್ಟಿನನನ್ನು ವಜ್ರದ ಗನಿಗೆ ಕರಕೊಂಡು ಹೋದನು. ನೀಗ್ರೋ ಗುಲಾಮರು ಕೆಸರು ಮಣ್ಣನ್ನು ನೀರಲ್ಲಿ ಕದಡಿ ವಜ್ರಗಳಿವೆಯೋ ಎಂದು ಪರೀಕ್ಷಿಸು ತ್ತಿದ್ದರು. ಬಾರ್ನಿ ಮಾರ್ಟಿನರು ಗನಿಯ ಕೆಲಸ ನೋಡುತ್ತ ಇದ್ದಾಗ ನೀಗ್ರೋ ಗುಲಾಮನೊಬ್ಬನು ಒಂದು ಕಲ್ಲಿನ ತುಂಡನ್ನು ಬಾರ್ನಿಯ ಕೈಗಿತ್ತನು. "ನೋಡು! ವಜ್ರವೆಂದರೆ ಇದೇ ಎನ್ನುತ್ತಾ ಬಾರ್ನಿ ಆ ಕಲ್ಲನ್ನು ಮಾರ್ಟಿನನ ಕೈಗಿತ್ತನು. ಆಗ "ಇಂತಹ ವಜ್ರದ ಗನಿಯ ಪಾರುಪತ್ಯಗಾರನಾಗಿ ಪಾಲುಗಾರನಾಗಿರುವುದು ನಿನ್ನ ಅದೃಷ್ಟ!" ಎಂದು ಮಾರ್ಟಿನ್ ನಕ್ಕನು.

ಆ ದಿನ ರಾತ್ರಿ ಮಲಗಲು ಹೋದಾಗ ಬಾರ್ನಿ ಮಾರ್ಟಿನ ನೊಡನೆ "ಗೆಳೆಯಾ, ಈ ವಜ್ರದ ಗನಿಯೆಂದರೆ ನಾನು ಜೀವ ಬಿಡು ತಿದ್ದೆ. ಈಗ ನನಗೆ ಬೇಸರ ಬಂದು ಹೋಗಿದೆ! ಇನ್ನೊಂದೆರಡು ದಿನಗಳಲ್ಲೆ ನನ್ನ ಈ ಕೆಲಸವನ್ನು ಬೇರೆಯವರ ಕೈಗೊಪ್ಪಿಸಲಿರುವೆ. ಆ ಮೇಲೆ ನಾನೂ ನೀನೂ ಸೀದ ಸಮುದ್ರ ತೀರಕ್ಕೆ ನಡೆಯುವ. ಈ ವಜ್ರದ ಗನಿಗಳಿಗೆ 'ಸಲಾಂ' ಹೇಳುವ" ಎಂದನು.

## ಹದಿನಾರು

ಬಾರ್ನಿ ಮಾರ್ಟಿನರು ಮತ್ತೆ ಎರಡು ವಾರ ಆ ವಜ್ರದ ಗನಿಯಲ್ಲಿ ಕಳೆದರು. ಅಷ್ಟರಲ್ಲಿ ಗನಿಗಳ ಪಾರುಪತ್ಯ ನೋಡಲು ಬೇರೆ ಜನ ಬಂದರು. ಮತ್ತೆ ಆ ಗೆಳೆಯರು ಹೆಚ್ಚು ದಿನ ಅಲ್ಲಿ ನಿಲ್ಲಲಿಲ್ಲ. ಕುದುರೆಯೇರಿ ಪ್ರಯಾಣ ಮಾಡಿದರು.

ಬಾರ್ನಿ ಮಾರ್ಟಿನರು ಕುದುರೆ ಏರಿ ರಿಯೋಡಿಜನೇರಿಯೋ ಪಟ್ಟಣದ ಕಡೆಗೆ ಸವಾರಿ ಬಿಡುತ್ತಿದ್ದಾಗ, ದಾರಿಯ ಬದಿಯಲ್ಲಿ ಒಬ್ಬ ಮನುಷ್ಯನು ಬಿದ್ದುಕೊಂಡಿದ್ದುದು ಕಂಡಿತು. ಬಾರ್ನಿ ಕುದುರೆಯಿಂದಿಳಿದು ಬಳಿಗೆ ಹೋಗಿ ನೋಡುವಾಗ ಆ ಮನು

ಷ್ಯನಿಗೆ ಜೀವವಿರಲಿಲ್ಲ. ಅವನ ಬಳಿ ಒಂದು ಚೀಲದ ಹೊರತು ಬೇರೇನೂ ಗಂಟು ಮೂಟೆಯಿರಲಿಲ್ಲ. ಆ ಚೀಲದಲ್ಲಿ ಬಂಗಾರದ ಹುಡಿಯೂ ವಜ್ರಗಳೂ ಇದ್ದುವು. ಅವರು ಆ ಸತ್ತ ಮನುಷ್ಯನನ್ನು ಅಲ್ಲೀ ಇದ್ದ ಒಂದು ಹೊಂಡದಲ್ಲಿ ಮಲಗಿಸಿ, ಅವನ ಮೇಲೆ ದೊಡ್ಡ ದೊಡ್ಡ ಕಲ್ಲುಗಳನ್ನು ಹೊರಳಿಸಿ, ಒಂದು ಗೋರಿ ಮಾಡಿ, "ಸತ್ತವನ ಆತ್ಮಕ್ಕೆ ಶಾಂತಿ ಕೊಡು ದೇವರೇ" ಎಂದು ಪ್ರಾರ್ಥಿಸಿ ಅಲ್ಲಿಂದ ಹೊರಟರು.

ಕೆಲವು ದಿನಗಳಲ್ಲಿ ಬಾರ್ನಿ ಮಾರ್ಟಿನರು ಬ್ರೆಜಿಲಿನ ಮುಖ್ಯ ಪಟ್ಟಣವಾದ ರಿಯೋಡಿಜನೇರಿಯೋ ನಗರವನ್ನು ತಲಪಿದರು. ಬಾರ್ನಿ ಮಾರ್ಟಿನನೊಂದಿಗೆ ತನ್ನ ಯಜಮಾನನ ಬಳಿಗೆ ನಡೆದನು. ತಾನು ತಂದಿದ್ದ ವಜ್ರಗಳ ಚೀಲವನ್ನು ಯಜಮಾನನಿಗೆ ಒಪ್ಪಿಸಿ, ತನಗೆ ದಾರಿಯಲ್ಲಿ ದೊರೆತ ಚೀಲವನ್ನೂ ಯಜಮಾನನ ಮುಂದಿಟ್ಟು ನಡೆದ ವೃತ್ತಾಂತವನ್ನೆಲ್ಲ ತಿಳಿಸಿದನು. ಬಾರ್ನಿಯ ಯಜಮಾನನು ಆ ಚೀಲವನ್ನು ತೆಗೆದುಕೊಂಡು ಅದರಲ್ಲಿದ್ದ ಬಂಗಾರ ಮತ್ತು ವಜ್ರಗಳಿಗಾಗುವ ಬೆಲೆಯನ್ನು ಕೊಟ್ಟನು. ಅಲ್ಲದೆ ಬಾರ್ನಿ ತನ್ನ ಬಳಿ ಮಾಡಿದ ಸೇವೆಗಾಗಿ ಅವನಿಗೆ ಕೈ ತುಂಬಾ ಇನಾಮು ಕೊಟ್ಟನು. ಆ ಹಣವನ್ನೆಲ್ಲ ಆ ಗೆಳೆಯರು ಪಾಲುಮಾಡಿ ಕೊಂಡಾಗ ನಾನ್ನೂರು ನಾನ್ನೂರು ಪೌಂಡುಗಳು ಅವರ ಪಾಲಿಗೆ ಬಂದುವು. ಕೆಲವು ದಿನ ಕಳೆದ ಮೇಲೆ ಅವರು ಯುರೋಪಿಗೆ ಹೊರಟ ಹಡಗೊಂದನ್ನು ಏರಿ ತಾಯ್ನಾಡಿಗೆ ಮರಳಿದರು.

* * * * *

ಬ್ರಿಟನಿನಲ್ಲಿ ಆರ್ಥರ್ ಎಂಬ ವ್ಯಾಪಾರಿಯಿದ್ದನು. ಅವನು ಮಾರ್ಟಿನನ ಅತ್ತೆ ದೊರತಿಗೆ ತುಂಬಾ ಸಹಾಯ ಮಾಡಿದನು. ದೊರತಿ ನೇಯುತ್ತಿದ್ದ ಶಾಲು ಚೀಲಗಳನ್ನೆಲ್ಲ ಅವನೇ ಕೊಂಡು ಕೊಳ್ಳುತ್ತಿದ್ದನು. ಪ್ರಾಯಹೋದ ದೊರತಿ ಇನ್ನು ಮುಂದೆ ಕೆಲಸಮಾಡ ಬೇಕಿಂದಿಲ್ಲವೆಂದೂ ಅವಳ ಜೀವನಾಂಶವನ್ನು ತಾನೇ

ನೋಡಿಕೊಳ್ಳುವೆನೆಂದೂ ಅವನು ಹೇಳಿದಾಗ ಅವಳು ಅದಕ್ಕೆ ಒಪ್ಪಿರಲಿಲ್ಲ. ಸುಮ್ಮಗೆ ಕುಳಿತು ಇನ್ನೊಬ್ಬರು ಕೊಟ್ಟುದನ್ನು ತಿಂದು ಕಾಲ ಕಳೆಯುವ ಸ್ವಭಾವ ಅವಳದಲ್ಲ. ಅದಕ್ಕಾಗಿ ಆರ್ಥರ್ ಅವಳಿಂದ ಕಾಲು ಚೀಲಗಳನ್ನು ನೇಯಿಸಿ ಕ್ರಯ ಕೊಟ್ಟು ಕೊಂಡುಕೊಳ್ಳುತ್ತಿದ್ದನು. ಮಾರ್ಟಿನ್ ಶಾಲೆಗೆ ಹೋಗು ತ್ತಿದ್ದಾಗ ಒಮ್ಮೆ ಬಾಬನೊಂದಿಗೆ ಜಗಳಾಡಿದ್ದನಷ್ಟೆ! ಆ ದಿನ ಮಾರ್ಟಿನ್ ಮನೆಗೆ ಹಿಂದಿರುಗಿದಾಗ, ಆರ್ಥರ್ ಅವರ ಮನೆ ಯಲ್ಲಿದ್ದನು. ಆ ದಿನ ಆರ್ಥರ್ ಮಾರ್ಟಿನನನ್ನು ಬಳಿಗೆ ಕರೆದು ತನ್ನಲ್ಲಿ ಕೆಲಸ ಕೊಡುವೆನೆಂದು ಹೇಳಿದ್ದನು.

* * * * *

ಬಾರ್ನಿಯೂ ಮಾರ್ಟಿನನೂ ಊರಿಗೆ ಹಿಂದಿರುಗಿದರು. ಆರ್ಥರನ ಕಚೇರಿಗೆ ಹೋದರು. ಗೆಳೆಯರಿಬ್ಬರೂ ಬಾಗಿಲು ದೂಡಿ ಒಳ ಹೊಕ್ಕರು. "ಬನ್ನಿ, ಬನ್ನಿ, ಕುಳಿತುಕೊಳ್ಳಿರಿ. ಹಾ! ನಿನ್ನನ್ನೆಲ್ಲಿಯೋ ನೋಡಿದಂತೆ ಕಾಣುತ್ತದೆ! ಎಲ್ಲಿಯೆಂದು ತಿಳಿ ಯದು" ಎಂದು ಆರ್ಥರ್ ಬಾರ್ನಿಯನ್ನು ಕೇಳಿದನು.

"ಹೌದು ಸರ್, ನೀವು ನೋಡಿದ್ದೀರಿ. ನಾನು ಎಷ್ಟೋ ವೇಳೆ ನಿಮ್ಮ ಹಡಗಿನಲ್ಲಿ ಪ್ರಯಾಣ ಮಾಡಿದ್ದೆ, ನಿಮ್ಮ ಕೆಲಸ ದಲ್ಲಿದ್ದೆ. ಬಾರ್ನಿ ಎಂದು ನನ್ನ ಹೆಸರು" ಎಂದು ಬಾರ್ನಿ ತನ್ನ ಪರಿಚಯ ಮಾಡಿಕೊಟ್ಟನು.

"ಹೌದು! ಹೌದು! ನೆನಪಾಯಿತು. ಈಗ ಕಣ್ಣು ಸರಿ ಯಾಗಿ ಕಾಣುವುದಿಲ್ಲ. ಆದುದರಿಂದಲೇ ನಿನ್ನ ಗುರುತು ಸಿಕ್ಕ ಲಿಲ್ಲ. ನಿನ್ನ ಸುದ್ದಿಯೇ ಇಲ್ಲದೆ ಎಷ್ಟೋ ದಿನಗಳಾದುವು. ನೀನು ಎಲ್ಲಿಗೆ ಹೋಗಿದ್ದೆ? ದೂರಕ್ಕೆ ಪ್ರಯಾಣ ಮಾಡಿದೆಯೆಂದು ತೋರು ತ್ತದೆ." ಎಂದು ಆರ್ಥರ್ ಆಶ್ಚರ್ಯವನ್ನು ವ್ಯಕ್ತಪಡಿಸಿದನು.

"ಹೌದು, 'ಹಾರುವ ಬೆಂಕಿ' ಎಂಬ ಹಡಗಿನಲ್ಲಿ, ಪ್ರಯಾಣ ಮಾಡಿದೆ. ಬ್ರೆಜಿಲನ್ನು ಸಮೀಪಿಸಿದಾಗ ನಮ್ಮ ಹಡಗು

ಹಡಗುಕಳ್ಳರಿಗೆ ತುತ್ತಾಯಿತು. ಆಗ ನಾವಿಬ್ಬರೂ ತಪ್ಪಿಸಿ ಕೊಂಡು ಬ್ರೆಜಿಲನ ಕಾಡುಮೇಡುಗಳಲ್ಲಿ ಅಲೆದಾಡಿದೆವು. ಬಾರದ ಕಷ್ಟ ಬಂದೆವು; ನೋಡದ ಸುಖ ನೋಡಿದೆವು." ಬಾರ್ನಿ ಉತ್ತರಿಸಿದನು.

"ಹೌದು, ಹೌದು, ಈ ಯುವಕನೂ ನಿನ್ನೊಂದಿಗೆ ಇದ್ದನಲ್ಲ ವೇ". ಹೌದು; ನಾನೂ ಇದ್ದೆ. ನಾನು ಮಾರ್ಟಿನ್ ಅಲ್ಲವೇ?"

'ಮಾರ್ಟಿನ್' ಎನ್ನುತ್ತ ಮುದುಕ ಆರ್ಥರ್ ಕುಳಿತಲ್ಲಿಂದ ಎದ್ದು ಮಾರ್ಟಿನನನ್ನು ಬಿಗಿಯಾಗಿ ಅಪ್ಪಿಕೊಂಡನು; ಸಂತಸದ ಕಣ್ಣೀರು ಸುರಿಸಿದನು; ಮಾರ್ಟಿನನ ಕೈಗಳನ್ನು ಹಿಡಿದುಕೊಂಡು ಕುಣಿದಾಡಿದನು. ಈ ಉದ್ವೇಗವೆಲ್ಲ ಕಳೆದ ಮೇಲೆ "ನನ್ನ ಪ್ರೀತಿಯ ಅತ್ತೆ ದೊರತಿ ಈಗೆಲ್ಲಿ ಇರುವಳು. ನೀವು ಅವಳ ವಿಚಾರವಾಗಿ ಏನೂ ಹೇಳಲಿಲ್ಲವಲ್ಲ! ಅವಳು ಎಲ್ಲಿದ್ದಾಳೆ? ಹೇಗಿದ್ದಾಳೆ? ಚೆನ್ನಾಗಿರುವಳೆ?" ಎಂದು ಹಲವು ಪ್ರಶ್ನೆಗಳನ್ನು ಕೇಳಿದನು.

ಪ್ರಶ್ನೆಗಳೊಂದಕ್ಕೂ ಆರ್ಥರ್ ಉತ್ತರಿಸಲಿಲ್ಲ. ಅವನು ತನ್ನ ಕೈಗಳಿಂದ ಮೋರೆಯನ್ನು ಮುಚ್ಚಿಕೊಂಡು ಮೌನವಾಗಿ ಕುರ್ಚಿಯ ಮೇಲೆ ಕುಕ್ಕರಿಸಿಬಿಟ್ಟನು.

"ಅವಳು ಚೆನ್ನಾಗಿ ಇರುವಳಲ್ಲವೇ?" ಮಾರ್ಟಿನ್ ನಡುಗುವ ದನಿಯಿಂದ ಕೇಳಿದನು.

"ಇಲ್ಲ, ಅವಳಿಗೆ ಅಸೌಖ್ಯವೇನೂ ಇಲ್ಲ ಅವಳು ಈ ಊರಲ್ಲಿ ಮಾತ್ರ ಇಲ್ಲ. ಒಂದು ವರ್ಷದ ಮೊದಲು ಊರುಬಿಟ್ಟು ಹೋಗಿ ಬಿಟ್ಟಳು; ಆ ಮೇಲೆ ಅವಳ ಸುದ್ದಿ, ಸುಳಿವು ಒಂದೂ ಇಲ್ಲ." ಆರ್ಥರ್ ಉತ್ತರಿಸಿ ಮುಂದುವರಿಸಿದ. "ಮಾರ್ಟಿನ್! ನೀನು ಕಾಣೆಯಾದ ಮೇಲೆ ನಿನ್ನ ಅತ್ತೆಯ ಉತ್ಸಾಹವೇ ಕುಗ್ಗಿಹೋಯಿತು. ಅವಳು ಕಾಲುಚೀಲ ನೇಯುವ ಉದ್ಯೋಗವನ್ನು ಬಿಟ್ಟು, ಸುಮ್ಮಗೆ ಜಗಲಿಯಲ್ಲಿ ಕುಳಿತುಕೊಂಡು ಸಮುದ್ರದ ಕಡೆಗೆ ನೋಡುತ್ತ

ಕಾಲಕಳೆಯುತ್ತಿದ್ದಳು. ಅವಳ ಚಾಕರಿಗೆಂದು ನಾನು ಒಬ್ಬ ಸಣ್ಣ ಹುಡುಗಿಯನ್ನು ನಿಲ್ಲಿಸಿದ್ದೆ. ಒಂದು ದಿನ ಆ ಹುಡುಗಿ ನನ್ನ ಬಳಿಗೆ ಬಂದು, 'ದೊರತಿ ತನ್ನ ವಸ್ತ್ರಗಳನ್ನೆಲ್ಲ ಗಂಟುಮೂಟೆ ಕಟ್ಟಿ, ಲಿವರ್‌ಪೂಲಿಗೆ ಹೋಗುವ ಕುದುರೆಗಾಡಿ ಹತ್ತಿ ಹೋಗಿ ಬಿಟ್ಟಳು. ಅವಳು ಹೋಗುವಾಗ ತಾನು ಲಿವರ್‌ಪೂಲಿಗೆ ಹೋಗುತ್ತೇನೆ, ಎಂದಿಷ್ಟೇ ಹೇಳಿದಳು' ಎಂದಳು. ಇದನ್ನು ಕೇಳಿದ ನಾನು ಕೂಡಲೇ ಲಿವರ್‌ಪೂಲಿಗೆ ಹೋಗುವ ಇನ್ನೊಂದು ಗಾಡಿ ಹಿಡಿದು ಹೋದೆನು. ಅಲ್ಲಿ ಸಾಧ್ಯವಿದ್ದಷ್ಟು ಹುಡುಕಾಡಿದೆನು. ಮುದುಕಿಯ ಪತ್ತೆಯಿಲ್ಲ. ಅಂದಿನಿಂದ ಅವಳನ್ನು ಹುಡುಕುವ ಕಾರ್ಯವನ್ನು ಬಿಟ್ಟಿಲ್ಲ. ಆದರೆ ಮುದುಕಿಯ ಪತ್ತೆ ಮಾತ್ರವಿಲ್ಲ."

ಆರ್ಥರನ ಮಾತನ್ನು ಮಾರ್ಟಿನ್ ಕಿವಿಗೊಟ್ಟು, ಮೌನವಾಗಿ ಕೇಳಿದನು. ಆರ್ಥರ್ ಮಾತು ಮುಗಿಸಿದ ಮೇಲೆ ಒಂದರ್ಧಗಳಿಗೆ ಸುಮ್ಮನೆ ಕುಳಿತನು. ಆ ಮೇಲೆ ಫಕ್ಕನೆ ಕುಳಿತಲ್ಲಿಂದ ಎದ್ದು, "ನಾನು ಹೋಗಿ ಬರುವೆ. ಲಿವರ್‌ಪೂಲಿಗೆ ಹೋಗಿಬರುವೆ. ಬಂದಮೇಲೆ ನಿಮ್ಮನ್ನು ಕಾಣುವೆ." ಎಂದು ಹೇಳಿ ಒಂದು ಕ್ಷಣ ಕಾಲ ಕೂಡ ನಿಲ್ಲದೆ, ಬಾರ್ನಿಯೊಡನೆ ಲಿವರ್‌ಪೂಲಿಗೆ ಹೊರಟನು.

ಲಿವರ್‌ಪೂಲಿನಲ್ಲಿ ಅತ್ತೆಯನ್ನು ಹುಡುಕತೊಡಗಿದ ಮಾರ್ಟಿನನಿಗೆ ದಿನಗಳು, ವಾರಗಳು, ತಿಂಗಳುಗಳು ಕಳೆದುದೂ ಗೊತ್ತಾಗಲಿಲ್ಲ. ಅತ್ತೆಯ ಪತ್ತೆ ಮಾತ್ರ ಇಲ್ಲ. ಮೊದಮೊದಲು ಬಾರ್ನಿಯೂ ಮಾರ್ಟಿನನೂ ಒಟ್ಟುಕೂಡಿಯೇ ಹುಡುಕಾಡಿದರು. ಮತ್ತೆ ಬಾರ್ನಿ ತನ್ನ ಬಂಧುಗಳನ್ನು ನೋಡಿಬರಲೆಂದು ಬಿಲ್ಬನ್ನಿಗೆ ಹೋದನು.

ಮಾರ್ಟಿನ್ ಒಂದು ದಿನ ಎಂದಿನಂತೆ ತಾನಿದ್ದ ಹೋಟೆಲಿನ ಜಗಲಿಯಲ್ಲಿ ಸುಮ್ಮಗೆ ಯೋಚನೆಯಲ್ಲಿ ಮುಳುಗಿ ಕುಳಿತಿದ್ದನು. ಆಗ ಅಲ್ಲಿಗೆ ಒಬ್ಬ ಪೋಲಿಸಿನವನು ಬಂದು, ಅವನಿಗೆ ಒಬ್ಬ ಮುದುಕಿ ಕಾಣಸಿಕ್ಕಿರುವಳೆಂದೂ, ಅವಳನ್ನು ನೋಡುವಾಗ

ಬಹುಶಃ ಅವಳು ಅವನ ಅತ್ತೆಯಾಗಿರಬಹುದೆಂದೂ ತಿಳಿಸಿದನು. ಮಾರ್ಟಿನ್ ಕೂಡಲೇ ಆ ಪೋಲಿಸಿನವನೊಡನೆ ನಡೆದನು.

ಪೋಲಿಸ್ ಸ್ಟೇಶನಿನ ಬಳಿಯ ಸತ್ರದ ಒಂದು ಕೋಣೆಯಲ್ಲಿ ಒಂದು ತಗ್ಗು ಮಂಚದ ಮೇಲೆ ಮುದುಕಿಯೊಬ್ಬಳು ಮಲಗಿದ್ದಳು. ನೋಡುವಾಗ ಅವಳಿಗೆ ಸ್ಮೃತಿ ಇದ್ದಂತೆ ತೋರುತ್ತಿದ್ದಿಲ್ಲ. ಸ್ಮೃತಿ ಇಲ್ಲದೆ, ಮಂಚದ ಮೇಲೆ ಮಲಗಿದವಳು ತನ್ನ ಅತ್ತೆಯೆಂದು ಗುರುತಿಸಲು ಅವನಿಗೆ ಹೆಚ್ಚು ಹೊತ್ತಾಗಲಿಲ್ಲ. "ಹೌದು, ನನ್ನ ಅತ್ತೆ ಇವಳು. ಎಂದು ಅರ್ಧ ಪೌಂಡಿನ ಒಂದು ನಾಣ್ಯವನ್ನಿತ್ತು ತುಂಬಾ ಉಪಕಾರವಾಯಿತು. ಉಪಕಾರವನ್ನು ಮರೆಯಲಾರೆ. ನಾನೊಬ್ಬನೇ ಅವಳ ಬಳಿ ಇರಬೇಕೆಂದು ಆಸೆ ಇದೆ. ಆದುದರಿಂದ ದಯಮಾಡಿ ನನ್ನೊಬ್ಬನನ್ನೇ ಬಿಡು." ಎಂದು ಮಾರ್ಟಿನ್ ಪೋಲಿಸಿನವನಿಗೆ ಹೇಳಲು, ಅವನು ಆ ಕೋಣೆಯ ಬಾಗಿಲು ಓರೆಮಾಡಿಕೊಂಡು ಅಲ್ಲಿಂದ ಹೊರಟನು.

ಮಾರ್ಟಿನ್ ಮೆಲ್ಲಗೆ ಅತ್ತೆಯ ಬಳಿ ಕುಳಿತನು. ಆಕೆಯ ಒಂದು ಕೈಯನ್ನು ಮೆಲ್ಲಗೆ ಎತ್ತಿ ತನ್ನ ತೊಡೆಯ ಮೇಲೆ ಇಟ್ಟುಕೊಂಡು, ಪೂಸಲು ತೊಡಗಿದನು. ಆಗ ಮೂರ್ಛೆಹೋಗಿದ್ದ ಆ ಮುದುಕಿಯ ಮೂರ್ಛೆ ತುಸು ತಿಳಿಯಾಯಿತು. ಅವಳು ಸಣ್ಣ ಸ್ವರದಲ್ಲಿ ಮಾತಾಡಿದಳು. "ಯಾರು ನೀನು? ಪಾದ್ರಿಯೊ? ಈಗ ಹೋದವನು ಇನ್ನೊಮ್ಮೆ ಬಂದೆಯೋ? ಅವನು ಬಂದಿದ್ದ, ನೀನು ನನ್ನ ಬಳಿಗೆ ಬಾ, ವಿಶ್ರಾಂತಿ ಕೊಡುತ್ತೇನೆಂದು ಹೇಳಿ ಹೋದ." ಮತ್ತೆ ಮಾತಿಲ್ಲ! ಬಹಳ ಕ್ಷೀಣಳಾಗಿರುವ ಇವಳನ್ನು ತಾನೀಗ ಗುರುತು ಹೇಳಿ ಮಾತಾಡಿಸಿದರೆ ಅಪಾಯವಾದೀತೆಂದು ಮಾರ್ಟಿನ್ ತನ್ನ ಪರಿಚಯ ಹೇಳದೆ ಸುಮ್ಮಗಿದ್ದ. ಒಂದೆರಡು ನಿಮಿಷಗಳಲ್ಲಿ ಆಕೆ ಮತ್ತೆ ಕಣ್ಣುತೆರೆದಳು. "ಮಾರ್ಟಿನನೂ ನನ್ನನ್ನು ಆಗಾಗ ನೋಡಲು ಬರುತ್ತಿದ್ದ, ನಿಜವಾಗಿ ಬರುತ್ತಿದ್ದುದಲ್ಲ! ಕನಸಿನಲ್ಲಿ ಬರುತ್ತಿದ್ದ. ನನಗೆ ಹಸಿವೆಯಾಗುತ್ತದೆ.

ನಾನು ಹಸಿವೆಯಿಂದ ಸಾಯುತ್ತೇನೆ." ಮುದುಕಿ ಮೌನವಾದಳು.

ಮಾರ್ಟಿನ್ ಮೆಲ್ಲಗೆ ಆಕೆಯ ಕೈಯನ್ನು ಕೆಳಗಿಟ್ಟು, ಅಲ್ಲಿಂದೆದ್ದು ಸಮೀಪದಲ್ಲಿದ್ದ ಹೋಟೆಲಿಗೆ ಹೋಗಿ, ಬಿಸಿ ಬಿಸಿ ತೋವೆಯನ್ನೂ, ಬ್ರೆಡ್ಡನ್ನೂ ತಂದನು. ಅತ್ತೆಯನ್ನು ಎಚ್ಚರಿಸಿ, ಬ್ರೆಡ್ಡನ್ನು ತೋವೆಯಲ್ಲಿ ಮುಳುಗಿಸಿ, ಮುಳುಗಿಸಿ ತಿನ್ನಿಸಿದನು. ಮುದುಕಿ ಕಣ್ಣು ಮುಚ್ಚಿಕೊಂಡೇ ಅವನ್ನೆಲ್ಲ ತಿಂದುಬಿಟ್ಟಳು. ಅಷ್ಟರಲ್ಲಿ ಪೋಲಿಸಿನವನು ಒಬ್ಬ ಡಾಕ್ಟರನನ್ನು ಅಲ್ಲಿಗೆ ಕರೆದು ಕೊಂಡು ಬಂದನು. ಡಾಕ್ಟರ್ ಮುದುಕಿಯನ್ನು ಪರೀಕ್ಷೆಮಾಡಿ, ನಿತ್ರಾಣ ಬಹಳವಿದೆಯೆಂದೂ, ಒಂದಿಷ್ಟು ದ್ರಾಕ್ಷಾರಸ ಕೊಟ್ಟರೆ ತ್ರಾಣ ಬರಬಹುದೆಂದೂ ಹೇಳಿದನು. ಮಾರ್ಟಿನ್ ಡಾಕ್ಟರನ ಕೈಯಲ್ಲಿ ಹಣ ಕೊಟ್ಟು ಕಳುಹಿಸಿದನು. ತುಸು ಹೊತ್ತಿನಲ್ಲಿ ದ್ರಾಕ್ಷಾರಸ ಬಂತು. ಮಾರ್ಟಿನ್ ಮುದುಕಿಗೆ ಕುಡಿಸಿದನು. ದ್ರಾಕ್ಷಾರಸ ಹೊಟ್ಟೆಗೆ ಹೋದಾಗ ಮುದುಕಿಗೆ ಸ್ವಲ್ಪ ತ್ರಾಣ ಬಂತು; ಆವಳಿಗೆ ತುಸು ಸೌಖ್ಯವಾದಂತೆ ತೋರಿತು.

"ನಿನಗೆ ನಿನ್ನ ಅಳಿಯ ಮಾರ್ಟಿನನ ವಿಷಯವೇನಾದರೂ ಕೇಳಬೇಕೆಂದಿದೆಯೋ? ನಾನು ಹಡಗಿನಲ್ಲಿ ಅವನನ್ನು ಕಂಡಿದ್ದೆ."

"ನೋಡಿದ್ದೀ! ಅವನು ಸತ್ತಿಲ್ಲವೇ? ಜೀವಿಸಿದ್ದಾನೆಯೋ?"

"ಇಲ್ಲ! ಇಲ್ಲ! ಅವನು ಜೀವಿಸಿದ್ದಾನೆ! ಇದೇ ಊರಲ್ಲಿದ್ದಾನೆ."

"ನೋಡುವ, ನೀನಾರೆಂದು ನೋಡುವ, ನಿನ್ನ ಮೋರೆ ನೋಡಲೇ ಇಲ್ಲ. ನಿನ್ನ ಸ್ವರ ಎಲ್ಲಿಯೋ, ಎಂದೋ ಕೇಳಿದಂತಾ ಗುತ್ತದೆ."

"ಇಲ್ಲಿ ನೋಡು! ನಿನ್ನ ಪ್ರೀತಿಯ ಮಾರ್ಟಿನ್ ಇಲ್ಲಿದ್ದಾನೆ.."

ಆಕೆ ಮುಂದೆ ಮಾತಾಡಲಿಲ್ಲ. ತನ್ನ ಎರಡೂ ಕೈಗಳನ್ನು ಮುಂದೆ ಚಾಚಿ ಮಾರ್ಟಿನನನ್ನು ಬಾಚಿ ಎಳೆದು ತನ್ನ ಎದೆಗೆ ಅಪ್ಪಿಕೊಂಡಳು. "ಬಂದೆಯಾ, ಈ ಮೊದಲು ಕನಸಿನಲ್ಲಿ

ಬಂದಂತೆ ಬೇಗನೇ ಹೋಗಬೇಡ. ತುಸುಹೊತ್ತು ಇದ್ದುಬಿಡು." ಎಂದು ಕಣ್ಣೀರು ಸುರಿಸಿದಳು.

"ಇದು ಕನಸಲ್ಲ, ನಾನು ನಿಜವಾದ ಮಾರ್ಟಿನ್."

"ನೀನು ಯಾವಾಗಲೂ ಹಾಗೆಯೇ ಹೇಳುವೆ. ಇದು ಕನಸಲ್ಲದೆ ಮತ್ತೇನೂ ಅಲ್ಲ. ಆದರೆ ಈ ದಿನದ ಕನಸು ಹಿಂದಿನ ಕನಸಿನಂತಲ್ಲ. ಸುಖದ ಕನಸು" ಎಂದು ನಿದ್ದೆಹೋದಳು.

ಮಾರ್ಟಿನನ ಉಪಚಾರದಿಂದ ದೊರೊತಿ ನಾಲ್ಕಾರು ದಿನಗಳಲ್ಲೇ ಸ್ವಸ್ಥಳಾದಳು. ಅವರಿಬ್ಬರೂ ಆಶ್‌ಫರ್ಡಿಗೆ ಹಿಂದಿರುಗಿದರು. ಬಾರ್ನಿಯೂ ಬಂದನು. ಮನೆಗೆ ಬಂದ ದಿನ ಅವರು ದೊಡ್ಡ ಔತಣ ಮಾಡಿದರು. ಔತಣಕ್ಕೆ ಮುದುಕ ಆರ್ಥರ್, ಊರ ಪಾದ್ರಿ, ಡಾಕ್ಟರ್ ಮೊದಲಾದವರೂ ಬಂದರು. ಔತಣದ ಊಟವಾದ ಮೇಲೆ ಮಾರ್ಟಿನ್ ತನ್ನ ಸಾಹಸವನ್ನೆಲ್ಲ ಅಲ್ಲಿದ್ದವರಿಗೆ ವಿವರಿಸಿದ. ಎಡೆಎಡೆಯಲ್ಲಿ ಬಾರ್ನಿಯೂ ಮಾತು ಕೂಡಿಸಿದ. ದೊರೊತಿ ಅತ್ತೆಗೆ ಆದಿನ ಆದ ಸಂತೋಷ ಅವಳ ಜೀವಮಾನದಲ್ಲಿ ಎಂದೂ ಆಗಿಲ್ಲವಂತೆ.

ಮುಂದೆ ಕೆಲವೇ ದಿನಗಳಲ್ಲಿ ಮುದುಕ ವ್ಯಾಪಾರಿ ಆರ್ಥರ್ ಮಾರ್ಟಿನನನ್ನು ತನ್ನ ವ್ಯಾಪಾರದ ಪಾಲುಗಾರನನ್ನಾಗಿಯೂ, ಬಾರ್ನಿಯನ್ನು ಪಾರುಪತ್ಯಗಾರನನ್ನಾಗಿಯೂ ನೇಮಿಸಿದನು.

ಮಾರ್ಟಿನ್ ಪ್ರಾಮಾಣಿಕತೆಯಿಂದ ವ್ಯಾಪಾರ ನಡೆಸುತ್ತ ಅವನ ಅತ್ತೆಗೆ ಅವಳ ಮುದಿ ಪ್ರಾಯದಲ್ಲಿ ಊರುಗೋಲಾಗಿ ಅವಳ ಕೊನೆಯ ದಿನಗಳು ಶಾಂತಿಯಿಂದ ಕಳೆಯಲು ತುಂಬಾ ಸಹಾಯಕನಾದನು; ಜನಪ್ರಿಯನಾಗಿ ಪರೋಪಕಾರಿಯಾಗಿ ಕೀರ್ತಿಗಳಿಸಿದನು.